# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | |
|---|---|---|---|
| ಶಾಂತಿ ಪುರಾಣ . . | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ . | 1 | 0 | 0 |
| ಸರಸ್ವತೀ . . . (ಸಾಮಾಜಿಕ ನಾಟಕ) | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ . (ಇಂಗ್ಲಿಷ್ ಸ್ವಯಂಬೋಧಿನಿ) | 0 | 8 | 0 |
| ಸಾಮುದ್ರಿಕ ಶಾಸ್ತ್ರ . . | 0 | 8 | 0 |
| ಹೊಂದೊವಲ ಹಂಬಲು. . | 0 | 6 | 0 |
| ವೀರಭೂಮಿ (ಕತೆ) . . | 0 | 1 | 6 |
| ಗೀತೆಯ ಕೈಗನ್ನಡಿ . . | 0 | 4 | 0 |
| ಗೀತೆಯ ಮೂಲ . . (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ I | 0 | 1 | 0 |
| ಡಿ II | 0 | 1 | 0 |
| ಡಿ III | 0 | 1 | 0 |
| ಡಿ IV | 0 | 1 | 0 |
| ಪುರಂದರ ದಾಸರ ಪದ ಭಾಗ I | 0 | 4 | 0 |
| ಡಿ II | 0 | 4 | 0 |
| ಡಿ III | 0 | 4 | 0 |
| ಮಧುವನ . . . | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | 0 | 4 | 0 |
| (Gouthama the Buddha) | 0 | 8 | 0 |
| ಭಗವದ್ಗೀತೆ . . . | 0 | 2 | 0 |
| ಕುಕ್ಕುಟ ಪಂಚಾಂಗ . . | 0 | 1 | 0 |
| ಮಗ್ಗಿ . . . . | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ . | 0 | 1 | 0 |
| ವೈಜಯಂತೀ ಪಂಚಾಂಗ . | 0 | 2 | 6 |
| ಜಯಪಾಂಡ್ಯ ವಿಜಯ . . | 0 | 2 | 0 |

## - ತುಳು ಪುಸ್ತಕಲು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) . (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) . . (ವಿಮರ್ಶಾತ್ಮಕ ಲೇಖನ) | 0 | 2 | 0 |
| ಅಳಿಯ ಸಂತಾನ ಕಟ್ಟ್‌ದ ಗುಟ್ಟು | 0 | 4 | 0 |
| ಕಾನಿಗ್ (ಪದ್ಯ) . . | 0 | 4 | 0 |
| ತುಳುವ್ಯಾಕರಣ . . | 0 | 8 | 0 |
| ಜನಮಲ್ರ್ (ನಾಟಕ) . . | 0 | 6 | 0 |
| ಮದ್‌ಮಾಳತ್ತ್ ಮದ್‌ಮಾಯೆ. (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ . . | 0 | 1 | 0 |
| ಪದ್ಯಮಾಲಿಕೆ . . | 0 | 1 | 0 |
| ಮಿತ್ಯನಾರಾಯಣ ಕತೆ. . | 0 | 8 | 0 |
| ಸತೀ ಕಮಲೆ (ನಾವೆಲ್) . . | 0 | 6 | 0 |
| ಕನ್ಯೋಪದೇಶ . . . | 0 | 2 | 0 |
| ಕನ್ನಡಕೊ . . . | 0 | 0 | 6 |
| ವಾಲಿಸುಗ್ರೀವರ ಕಾಳಗ. . | 0 | 3 | 0 |
| ಬೊಬ್ಬರ್ಯ (ಪಾಡ್ದನ) . . | 0 | 2 | 0 |
| ತೊಡಕಿನಾರ್ ,, . . | 0 | 2 | 0 |
| ಮುಂಡತ್ತಾಯ ,, . . | 0 | 2 | 0 |
| ವಿಶ್ವರೂಪ ದರ್ಶನ . . (ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | 0 | 1 | 0 |
| ಭಗವದ್ಗೀತೆ . . | 0 | 5 | 6 |

ತುಳುನಾಡ್ ಪ್ರೆಸ್,
ಉಡುಪಿ, ದ. ಕ.

# ಅಂತರಂಗ

ಸಂಪುಟ ೧. | ೧೮ ಸಪ್ಟೆಂಬರ್ '೩೮ ಆದಿತ್ಯವಾರ. | ಸಂಚಿಕೆ ೧೦.

**ಅಂತರಂಗ**

ವಿಶೇಷ ತರದ ಕನ್ನಡ ವಾರಪತ್ರಿಕೆ.

**ಮಣಿಪಾಳ, ಉಡುಪಿ.**



## ಚಂದಾ ವಿವರ:

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

. . . . .

**ಬಿಡಿ ಸಂಚಿಕೆ ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

. . . . .

## ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | | ,, | ೧—೦—೦ | ,, |

## ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.

೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.

೩. ಬದಲಾವಣೆಯಲ್ಲಿ ಒಂದು ವಾರ ಮುಂಚಿತವಾಗಿ ತಿಳಿಸಬೇಕು.

೪. ಬ್ಲೋಕುಗಳು ವಾಪಾಸು ಬೇಕಾದಲ್ಲಿ ಅವರವರ ಖರ್ಚಿನಿಂದಲೇ ವಾಪಾಸು ಪಡೆಯುಬೇಕು.

೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.

**ಮಾಲಕರು ಮುದ್ರಕರು ವ ಪ್ರಕಾಶಕರು:**

ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.

**ಮುದ್ರಣ ವ ಪ್ರಕಟನಾ ಸ್ಥಳ: ಮಣಿಪಾಳ ಪವರ್ ಪ್ರೆಸ್, ಮಣಿಪಾಳ, ಉಡುಪಿ.**

# ಸಿ ಹಿ - ಕ ಹಿ

ಇತ್ತೀಚೆಗೆ ಭಯಂಕರ ಸಂದರ್ಶನಗಳ ಸುದ್ದಿಯನ್ನು ನಾವು ಕೇಳುತ್ತಿದ್ದೇವೆ. ಬ್ರಿಟಿಷ್ ಉಪಮಂತ್ರಿ ಕರ್ನಲ್ ಮ್ಯೂರ್ ಹೆಡ್‌ರವರು ಭಾರತವನ್ನು ಸಂದರ್ಶಿಸುತ್ತಾರೆಂದು ತಿಳಿದೊಡನೆಯೇ ಜೆಕೊಸ್ಲೊವೇಕಿಯದ ಹೆರ್ ಹೆನ್ಲಿನರು ಹಿಟ್ಲರ್ ಮಹಾಶಯನನ್ನು ಸಂದರ್ಶಿಸಿದರು. ನಾಡದು ಮಿ|| ಜಿನ್ನರು ಕೈರೋ ನಗರದಲ್ಲಿ ಜರಗುವ ಪೆಲೆಸ್ಟೈನ್ ಪರಿಷತ್ತಿಗೆ ಹೋದವರೇ ಐಗುಪ್ತವನ್ನು ಸಂದಶಿಸುವರಂತೆ. ಧುರೀಣರ ಸುದ್ದಿಯಂತಿರಲಿ. ಕಾಂಗ್ರೆಸ್ ಜನರು ತಿರುವಾಂಕೂರು, ಕಾಶ್ಮೀರ್, ನಾಭಾ, ನೀಲಗಿರಿ ಮೊದಲಾದ ಸಂಸ್ಥಾನಗಳ ಸೆರೆಮನೆಗಳನ್ನು ಸಂದರ್ಶಿಸುತ್ತಿದ್ದಾರೆ. ಹೆಚ್ಚೇಕೆ? ಮ್ಯುನಿಸಿಪಾಲಿಟಿಯ ಬಿಲ್ ಕಲೆಕ್ಟರರು ಕೂಡಾ ತೆರಿಗೆ ಕೊಡುವವರ ಮನೆಗಳಿಗೆ "ದಂಡಧಾರಿ"ಗಳಾಗಿ ಹೋಗುವರಂತೆ.

× × ×

ನೋಡುವುದಿದ್ದರೆ ನಿಜವಾಗಿ ಈ ಸಂದರ್ಶನಗಳನ್ನು ಮೊದಲು ಜಾರಿಗೆ ತಂದವನು ಮುಸ್ಸೋಲಿನಿ. ಅವನು ಬರ್ಲಿನನ್ನು ಸಂದರ್ಶಿಸಿದ. ಜರ್ಮನಿಯ ಮುಸ್ಸೋಲಿನಿ ರೋಮನ್ನು ಸಂದರ್ಶಿಸಿ ಇಟಲಿಯ ಹಿಟ್ಲರನಿಗೆ ಸಮರ್ಪಕವಾದ ಉತ್ತರವನ್ನಿತ್ತನು. ಜಗತ್ತಿನಲ್ಲಿ ಮಹಾ ಸಂದರ್ಶನಗಳಾಗುವಾಗ ಬ್ರಿಟನು ಹಿಂದುಳಿಯಬಾರದೆಂದು ಇಂಗ್ಲೆಂಡಿನ ರಾಜರು ಫ್ರಾನ್ಸನ್ನು ಸಂದರ್ಶಿಸಿದರು. ಇದಾದೊಡನೆಯೆ ಹಂಗೇರಿಯದ ಜನರಲ್ ಹಾರ್ಥಿಯವರು ಜರ್ಮನಿಯನ್ನು ಸಂದರ್ಶಿಸಿದರು. ಲೋಕವೇ ಸಂದರ್ಶಿಸುತ್ತಿರುವಾಗ ಭಾರತವು ಸುಮ್ಮನಿರುವುದೆ? ಇಲ್ಲ. ಪಂಡಿತ ನೆಹರುಗಳು ಸ್ಪೈನಿಗೆ ಹೋಗಿ ವೀರರಾದರು. ಸರ್ದಾರ್ ಪಟೇಲರು ಕರಾಚಿಯನ್ನು ಸಂದರ್ಶಿಸಿ "ಜನರು ನನ್ನನ್ನು ಹಿಟ್ಲರನೆಂದು ಕರೆಯುತ್ತಾರೆ - ಆದರೆ ತಾನು ಅತಿಹಿಟ್ಲರ್" ಎಂದರು. ಇಷ್ಟೆಲ್ಲಾ ನಡೆಯುವಾಗ ಕರ್ನಾಟಕವು ಸುಮ್ಮನಿತ್ತೇ ಇಲ್ಲ. ಕಮಲಾದೇವಿಯವರು ತಿರುವಾಂಕೂರಿಗೆ ಹೋಗಿ "ಕಾಯಿದೆ ಭಂಗ" ಮಾಡಿ ಹಿಂದೆ ಬಂದೇಬಿಟ್ಟರು.

× × ×

ಲಾರ್ಡ್ ಲಿನ್ಲಿತ್ಗೋರವರು ಲಂಡನನ್ನು ಸಂದರ್ಶಿಸಿ ಫೆಡರೇಶನಿನ ಕುರಿತು ಸಿಕ್ಕಾಬಟ್ಟೆ ಚರ್ಚಿಸುತ್ತಿರುವಾಗ ಸರ್ ಸುಲ್ತಾನ್ ಅಹಮುದ್‌ರವರು ಭಾರತದ ಜನಾಂಗಸಭೆಯ ಪ್ರತಿನಿಧಿಯಾಗಿ ಹೋಗಿ ಏನೇನೋ ಮಾಡಲಿರುವರಂತೆ. ಮೈಸೂರಿನ ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲ್‌ರವರು ಅತ್ಯಂತ ರಹಸ್ಯ ಕೆಲಸದಮೇಲೆ ಢಿಲ್ಲಿಯನ್ನು ಸಂದರ್ಶಿಸಿ ಮೈಸೂರು ಎಸೆಂಬ್ಲಿಯ ದಸರಾ ಅಧಿವೇಶನದ ಅಧ್ಯಕ್ಷತೆ ವಹಿಸಲು ಸಪ್ಟಂಬರ್ ೨೮ರಂದು ಹಿಂತಿರುಗುವರಂತೆ. ಪ್ರಾಂತಿಕ ಮಂತ್ರಿಗಳ ಕುರಿತು ಹೇಳಬೇಕಾಗಿಲ್ಲ. ಅವರು ಎಲ್ಲಾ ಪ್ರಾಂತ್ಯಗಳಲ್ಲಿ ಬಿರುಗಾಳಿಯಂತೆ ಸಂಚರಿಸಿ ಮಾಡುತ್ತಿರುವ ಭಾಷಣಗಳಿಂದ ಜನರು ಯಾವುದನ್ನು ಹಿಡಿಯುವುದು ಯಾವುದನ್ನು ಬಿಡುವುದೆಂದು ತಬ್ಬಿಬ್ಬಾಗಿದ್ದಾರೆ.

× × ×

ಇಷ್ಟೆಲ್ಲಾ ಸಂದರ್ಶನಗಳಾಗುತ್ತಿರುವಾಗ ಮಧ್ಯಪ್ರಾಂತ್ಯದ ಹರಿಜನರು ಸುಮ್ಮನಿದ್ದಾರೆಂದು ಭಾವಿಸಿದ್ದೀರಾ. ಇಲ್ಲ. ಶಿವಗಾಂವನ್ನು ಸಂದರ್ಶಿಸಿ, ಗಾಂಧಿಜಿಯವರ ಆಶ್ರಮದ ಸ್ತ್ರೀವಿಭಾಗದಲ್ಲಿ ತಂಗಿ "ಕಂತಿನ ಸತ್ಯಾಗ್ರಹ" ಮಾಡುತ್ತಿದ್ದಾರೆ. ಮುಂಬಯಿಯ ಆರ್ಥಿಕ ಮಂತ್ರಿಗಳು ಬೆಳಗಾಂವನ್ನು ಸಂದರ್ಶಿಸಿ ಕಾಂಗ್ರೆಸ್ ಕೆಲಸಗಾರರಲ್ಲಿ ಜಾತೀಯ ವೈಷಮ್ಯವು ಬರದಂತೆ ನೋಡಿಕೊಳ್ಳುತ್ತೇನೆಂದು ಪ್ರತಿಜ್ಞೆ ಮಾಡಿದರಂತೆ.

× × ×

ಒಟ್ಟಿನಮೇಲೆ ಸಂದರ್ಶನಗಳಿಲ್ಲದಿದ್ದರೆ ಲೋಕವೇ ನಡೆಯುವಂತಿಲ್ಲ. ಹೆಚ್ಚೇಕೆ, ಮೊನ್ನೆ ಹೈದರಾಬಾದ್ ಸಂಸ್ಥಾನವನ್ನು ಕ್ರಿಮಿನಲ್ ಕಾಯಿದೆಯು ಸಂದರ್ಶಿಸಿ, ಸಂಸ್ಥಾನ ಕಾಂಗ್ರೆಸಿನವರು ಸದ್ಯದಲ್ಲಿಯೇ ಸೆರೆಮನೆಗಳನ್ನು ಸಂದರ್ಶಿಸುವಂತೆ ಮಾಡಲಿದೆ. ದೂರದಲ್ಲಿರುವ ಭಾರತದ ಗಡಿನಾಡಿನಲ್ಲಿ ಖಾನ್ ಅಬ್ದುಲ್ ಗಫಾರ್ ಖಾನರು ಸರಹದ್ ಕಿಸಾನ್ ಸತ್ಯಾಗ್ರಹಿಗಳನ್ನು ಸಂದರ್ಶಿಸಿ ಫುಲಾದರ್ ಕೈದಿಗಳನ್ನು ಬಿಡಿಸಲು ಯತ್ನಿಸುತ್ತೇನೆಂದಿರುವರಂತೆ.

× × ×

ಮೊನ್ನೆ ಮಂಗಳೂರನ್ನು ಸಂದರ್ಶಿಸಲು ಹೋದ ಕೂಳೂರು ಸುಬ್ಬಣ್ಣ ಭಂಡಾರಿಯರು ಜಟ್ಕದ ಚಕ್ರದಡಿಗೆ ಬಿದ್ದು ಸ್ವರ್ಗವಾಸಿಗಳಾದರಂತೆ. ಲಾರ್ಡ್ ರನ್ಸಿಮೆನರು ಜೆಕೊಸ್ಲೊವೇಕಿಯವನ್ನು ಸಂದರ್ಶಿಸಿ ಯುರೋಪಿನ ರಾಜಕೀಯ ಪ್ರವಾಹದಲ್ಲಿ ಈಜುತ್ತಿದ್ದಾರೆ. ಜಪಾನಿನವರು ಚೀನವನ್ನು ಬೇಡವೆಂದರೂ ಬಾಂಬು ವಿಷಗಾಳಿಯ ಸಹಾಯದಿಂದ ಸಂದರ್ಶಿಸುತ್ತಿದ್ದಾರೆ. ಈ ಲೋಕವನ್ನು "ಶಾಂತಿ"ಯು ಎಂದು ಸಂದರ್ಶಿಸುವಳೋ ತಿಳಿಯದಾಗಿದೆ.

—o—

# ಕನ್ನಡಸಾಹಿತಿಗಳಿಗೆ ಅಪೂರ್ವ ಸಂದರ್ಭ

## ಪ್ರಕಾಶಕರ ಭಾಗ್ಯೋದಯದ ಶುಭಚಿಹ್ನೆ!

ಸಾಹಿತ್ಯ ಸೇವೆಯೆಂದು ಸುಮ್ಮಗೆ ಹೇಳಿದರಾಯಿತೆ? ಸೇವೆಯು ಕಾರ್ಯರೂಪದಲ್ಲಿ ನಡೆಯಬೇಕು. ಪುಸ್ತಕಗಳನ್ನು ಕೊಂಡುಕೊಳ್ಳುವವರಿಲ್ಲನೆಂದು ಹೇಳುವಂತಿರಬಾರದು. ಪತ್ರಿಕೆಗಳ ಸಂಚಿಕೆಗಳು ಮುದ್ರಿಸಿದಂತೆಯೇ ಕಾರ್ಯಾಲಯದಲ್ಲಿ ಉಳಿಯುತ್ತವೆ ಎಂಬ ಮಾತಿಗೆ ಎಡೆಯಿರಬಾರದು. ಇದನ್ನು ಓದುವಾಗ ನಾನೇನು ಹೊಸ ಬ್ರಹ್ಮನೆಂದು ನೀವು ಭಾವಿಸಬೇಡಿರಿ. ಆದರೆ ಭಾವೀ ಜನಾಂಗಕ್ಕೆ ಈಗಲೇ ಸಾಹಿತ್ಯಾಭಿರುಚಿಯನ್ನುಂಟುಮಾಡುವ ಹೊಸತೊಂದು ವಿಧಾನವನ್ನು ನಾನರಿತಿದ್ದೇನೆ. ಹೀಗೆಂದೊಡನೆಯೇ ನನಗೆ ಮಕ್ಕಳಿರುವರೆಂದು ಭಾವಿಸಬೇಡಿ. ಡಾ। ಮೇರಿ ಸ್ಟೋಪ್ಸ್‌ರವರ ಮಿತಸಂತತಿ ತತ್ವವನ್ನು ಅಕ್ಷರಶಃ ಅನುಸರಿಸುವ ಮಹಾಶಯ ನಾನು. ಆದರೆ ಇನ್ನೂ ಅವಿವಾಹಿತನಾಗಿರುವುದರಿಂದ ತತ್ವಗಳನ್ನು ಇಷ್ಟರ ತನಕವೂ ಕಾರ್ಯರೂಪಕ್ಕೆ ಭಾಷಾಂತರಿಸುವ ಸಂದರ್ಭವು ನನಗೆ ದೊರಕಲಿಲ್ಲ. ಒಂದು ವೇಳೆ ಈಗಲೇ ದೊರಕಿದರೂ ಭಾವೀ ಜನಾಂಗಕ್ಕೆ ಸಾಹಿತ್ಯಾಭಿರುಚಿಯುಂಟುಮಾಡುವ ಕಾರ್ಯವನ್ನು ನಾನು ಮಾಡುವಂತಿಲ್ಲ. ಅದಂತಿರಲಿ. ನನ್ನ ಮುಂದೆ "ಸಾಹಿತ್ಯ ದರ್ಪಣ"ವೆಂಬೊಂದು ಪತ್ರಿಕೆಯ ಆಗೋಸ್ತು ಸಂಚಿಕೆಯಿದೆ. ಆಸ್ಟ್ರೇಲಿಯದಲ್ಲಿ ಜೀಮೂತವಾಹನರಾಯರೆಂಬ ಏಕಮಾತ್ರ ಕನ್ನಡಿಗರಿದ್ದರೂ ಕನ್ನಡ ಸಾಹಿತ್ಯದಲ್ಲಿ ಅವರಿಗೆ ಅಪಾರ ಪ್ರೇಮವಿರುವುದರಿಂದ ಈ ಪತ್ರಿಕೆಯನ್ನು ಅವರು ಮೆಲ್ಬೋರ್ನ್ ನಗರದಿಂದ ಹೊರಡಿಸುತ್ತಿದ್ದಾರೆ. ಮಂಗಳೂರಿನಿಂದ ಎರಡು ವರ್ಷಗಳ ಹಿಂದೆ ಕನ್ನಡ ಮೊಳೆಗಳನ್ನು ಅವರು ಕೊಂಡೊಯ್ದು "ಸಾಹಿತ್ಯ ಕಲಾ ಮುದ್ರಣಾಲಯ"ವೆಂಬುದನ್ನು ಅಲ್ಲಿ ಸ್ಥಾಪಿಸಿದ್ದಾರಂತೆ.

ಂಂ

ಈ ಪತ್ರಿಕೆಯ ಆಗೋಸ್ತು ಸಂಚಿಕೆಯ ೧೩ನೆಯ ಪುಟದಲ್ಲಿ 'ಹಿರಿಯರಿಗೊಂದು ಮಾತು' ಎಂಬೊಂದು ಲೇಖನವನ್ನು ಶ್ರೀ. ತಿಪ್ಪಾ ಭಟ್ಟ ಸಾಹಿತ್ಯ ಶಿರೋಮಣಿ, ಅವರು ಬರೆದಿದ್ದಾರೆ. ಅವರ ರೇಖಾ ಚಿತ್ರವನ್ನು ಇಲ್ಲಿ ಪ್ರಕಟಿಸಲಾಗಿದೆ. ಈ



ಆಸ್ಟ್ರೇಲಿಯದಿಂದ "ಸಾಹಿತ್ಯದರ್ಪಣ"
ದಲ್ಲಿ ಲೇಖನ ಬರೆದಿರುವ
ಶ್ರೀ. ತಿಪ್ಪಾ ಭಟ್ಟ, ಸಾಹಿತ್ಯ ಶಿರೋಮಣಿ.

ಲೇಖನವು ಕನ್ನಡ ಸಾಹಿತ್ಯದಲ್ಲೇ ನಭೂತೋ ನಭವಿಷ್ಯತಿ ಎಂಬಂತಿರುವುದರಿಂದ ಅದರ ಪ್ರಾಮುಖ್ಯಾಂಶಗಳನ್ನು ಕೆಳಗೆ ಕೊಡಲಿಚ್ಛಿಸುತ್ತೇನೆ.

ಂಂ

"ಮಕ್ಕಳಿಗೆ ಪುಸ್ತಕಗಳಲ್ಲಿ ಪ್ರೇಮ ಹುಟ್ಟಿಸುವ ಬಗೆಯೆಂತು?" ಎಂಬ ಶಿರೋನಾಮೆಯ ಕೆಳಗೆ ಈ ವಿಧಾನವು ಪ್ರಕಟಿಸಲ್ಪಟ್ಟಿದೆ.

"ಯಾವಾಗಲೂ ಬಾಲ್ಯದಲ್ಲಿಯೇ ಒಂದು ಅಭ್ಯಾಸವನ್ನು ಮಕ್ಕಳಿಗೆ ಕಲಿಸಬೇಕು" ಎನ್ನುತ್ತಾರೆ ತಿಪ್ಪಾ ಭಟ್ಟರು. ತಿಪ್ಪಾ ಭಟ್ಟರಿಗೆ ಮಕ್ಕಳಿಲ್ಲವೆಯೆಂದು ನನಗರಿಯದಿದ್ದರೂ ಅವರ ಹೊಟ್ಟೆಯ ಗಾತ್ರವನ್ನು ನೋಡುವಾಗ — ಓ — ತಪ್ಪದೆ, ಮಕ್ಕಳ ತಂದೆಯಾಗುವ ಶಕ್ತಿ ಅವರಲ್ಲಿರಬಹುದೆಂದು ಸ್ಪಷ್ಟವಾಗುತ್ತದೆ. ಮುಂದುವರಿಸುತ್ತಾ ಬರೆಯುತ್ತಾರೆ ಭಟ್ಟರು: ಮಗುವಿನ ಕೈಗಳು ಹೇಗಾದರೂ ಪುಸ್ತಕಗಳೆಡೆಗೆ ಹೋಗುವಂತೆ ಮಾಡಬೇಕು.

### ಜನನಿಯರ ಕರ್ತವ್ಯ.

ಮಹತ್ವವಾದುದೆನ್ನುತ್ತಾರೆ ಶ್ರೀ. ಭಟ್ಟರು "ತಾಯಿಯು ಮಗುವಿನ ಕೈಯ್ಯನ್ನು ಪೂರ್ಣವಾಗಿ ತೊಳೆದ ನಂತರ ತನ್ನ ಕೈಯ್ಯಿಂದ ಹಿಡಿಯಲಿ"— ಆದರೆ ಕೈ ತೊಳೆಯುವಾಗ ಸಾಬೂನನ್ನು ಉಪಯೋಗಿಸಬೇಕೆಂದು ಹೇಳಲು ಮರೆತು ಬಿಟ್ಟ — "ಆ ಬಳಿಕ ಸುಂದರವಾದ ಮ್ಯಾಗಟ್ಟಿನ ಪುಸ್ತಕದ ಮೇಲೆ ಮಗುವಿನ ಎರಡೂ ಕೈಗಳನ್ನಿಟ್ಟು 'ಚಂದ, ಚಂದ' 'ಸುಂದರ ಪುಸ್ತಕ' ಎಂದು ಹೇಳಿಸಲಿ. ಸ್ವಲ್ಪ ಸಮಯದ ನಂತರ ಆ ಪುಸ್ತಕವನ್ನು ಹಿಡಿದುಕೊಳ್ಳಲು ಕೊಟ್ಟು ಮಗುವನ್ನು ಸಂತೈಸಬೇಕು. ಮಗುವಿಗೆ ಬೇಸರ ಹುಟ್ಟಿ ಅದು ಕೆಳಗೆ ಬಿಸಾಡಬಹುದೆಂಬ ಸಂಶಯ ಹುಟ್ಟಿದೊಡನೆ ಜಾಗ್ರತೆಯಾಗಿ ಅದನ್ನು ತೆಗೆದಿಡಬೇಕು."

### ಇಷ್ಟು ಮಹತ್ವದ ವಿಧಾನ

ವನ್ನು ಜಗತ್ತಿನಲ್ಲಿ ಯಾರೂ ಕಂಡುಹಿಡಿದಿರಲಿಕ್ಕಿಲ್ಲ. ಈ ರೀತಿಯಲ್ಲಿ ಪುಸ್ತಕಾಭಿರುಚಿಯನ್ನು ಹುಟ್ಟಿಸಿದರೆ ಭಾವೀ ಜನಾಂಗವು "ಮಲೆಯಾಳವ್ ಮ್ಯಾಂತ್ರಿಕ ಶಾಲೆಯ ಕೆಟಲಾಗ್"ನ್ನು ಕೂಡಾ ಪ್ರೀತಿಸುವುದರಲ್ಲಿ ಸಂಶಯವಿಲ್ಲ. ಮುದ್ರಿತವಾದವುಗಳೆಲ್ಲಾ ಭಾವೀ ಜನಾಂಗದಿಂದ ಕೊಂಡುಕೊಳ್ಳಲ್ಪಡುವುವು. ಆಗ ಇಂತ ಲೆಕ್ಕವಿತಿಯಿಲ್ಲದೆ ಕತೆ ಬರೆಯುವವರು ತಮ್ಮ ಪುಸ್ತಕಗಳನ್ನು ನಿರ್ಭಯವಾ

ಮುದ್ರಿಸಬಹುದು, (ಅಂದರೆ ಧರ್ಮಕ್ಕೆ ಮುದ್ರಿಸಿ ಕೊಡುವ ಜವಾಬ್ದಾರಿಯನ್ನು ಯಾರಾದರೂ ವಹಿಸಬೇಕು.) ತಿಪ್ಪಾ ಭಟ್ಟರ ಸಾಹಿತ್ಯಾಭಿರುಚಿ ಹುಟ್ಟಿದ ಹುಡುಗನು ಪುಸ್ತಕಭಂಡಾರಕ್ಕೆ ಹೋಗಿ "ಥಕ ಥೈ ತಿಮ್ಮು" ಎಂಬ ಪುಸ್ತಕದ ಬಾಹ್ಯಾಂಗ ವನ್ನು ಕಂಡು ಆನಂದದಿಂದ ಕುಣಿಯಬಹುದು. ಕಾರಣ — ಚಿಕ್ಕಂದಿನಿಂದಲೆ ಬಾಹ್ಯಾಂಗವನ್ನು ಕಂಡು ಅಭ್ಯಾಸ. ಒಳಗೆ ಏನುಬೇಕಾದರೂ ಇರಲಿ, ಪುಸ್ತಕವು "ಚಂದ, ಚಂದ ಸುಂದರ ಪುಸ್ತಕ"

೦೦

ಈ ಪರಿಸ್ಥಿತಿಯು ಸದ್ಯದಲ್ಲೇ ಬರಲಿರುವುದರಿಂದ ಪ್ರಕಾಶಕರು ಬದುಕಿದಂತಾಯಿತು. ಪ್ರಕಾಶಕರು ಪುಸ್ತಕದ ಬಾಹ್ಯಾಂಗವನ್ನು ಪ್ರತಿ ಬಾರಿ ಬದಲಾಯಿಸಿದರೆ ಪ್ರಾತಃಕಾಲ ಶ್ಯಾಮ ಭಟ್ಟರ ಹೊಟೆಲಿನ "ಇಡಲಿ" ಯು ಖರ್ಚಾದಂತೆ ತಮ್ಮ ಪುಸ್ತಕಗಳನ್ನೂ ಖರ್ಚು ಮಾಡಬಲ್ಲರು. ಹೀಗಾದರೆ ಕನ್ನಡ ಸಾಹಿತ್ಯದ ಉದ್ಧಾರವಾದಂತಾಗುತ್ತದೆ. "ಸರಸ್ವತಿಯ ಗೋಣು ಮುರಿಯುವ" ಬದಲು ಆಕೆಯು ಆನಂದದಿಂದ ನಕ್ಕು ಹೊಟ್ಟೆ ಉಬ್ಬಾಗವಾಗಿ ಕೊನೆಗೆ ವೈದ್ಯರು ಬರುವಂತಾಗಬಹುದು.

೦೦

ಇದರಲ್ಲಿ ಅತ್ಯಂತ ಸಂತೋಷದ ಸಂಗತಿಯೆಂದರೆ ಶ್ರೀ. ತಿಪ್ಪಾ ಭಟ್ಟರು ಕನ್ನಡ ಭಾಷೆಗೆ ಮರುಳಾದ ಇಂಗ್ಲಿಷ್ ಹಿರಿಯರ ನಿಜಾಭಿಪ್ರಾಯಕ್ಕನುಸಾರವಾಗಿ ಆ ಲೇಖನವನ್ನು ಬರೆದಿರುವುದು. ಪ್ರಾಯಶಃ ಮುದ್ರಣವಾದುದೆಲ್ಲಾ ಇವರ ಪಾಲಿಗೆ ಉಚ್ಚ ಸಾಹಿತ್ಯವಾಗಬಹುದು. ಆದರೆ ಇದರಿಂದ ಮಾನವ ಸಮಾಜಕ್ಕೆ ಮಹತ್ವದ ಒಂದು ಪ್ರಯೋಜನವಿದೆಯೆಂಬುದನ್ನು ಕನ್ನಡಿಗರು ಮರೆಯಬಾರದು. ಪುಸ್ತಕಗಳು ಹೆಚ್ಚಿದಂತೆ ಅವುಗಳನ್ನಿಡುವ ಕಪಾಟುಗಳು ಹೆಚ್ಚುತ್ತವೆ. ಅಂದರೆ ಬಡಗಿಗಳಿಗೆ ಕೆಲಸ ಸಿಕ್ಕಿದಂತಾಗುತ್ತದೆ. ಮುಂದೆ ಪೇಟೆಗಳಲ್ಲಿ ಹಳೆ ಪುಸ್ತಕಗಳನ್ನು ಆರೇಳು ಪೈಗಳಿಗೆ ಮಾರುವ ಮಹನೀಯರು ಸಿಗಲಾರರು. ಉಪ್ಪು ಕಟ್ಟಿಕೊಡುವ "ಗಜೆಟ್" ಕೂಡಾ ಕಾಣಸಿಗದು.

೦೦

ಅಷ್ಟುಮಾತ್ರವಲ್ಲ, ಈ ವಿಧಾನವು ಜಾರಿಗೆ ಬಂದರೆ ನಮ್ಮಿಬ್ಬರ (ಅಂದರೆ-ನನ್ನದು ಮತ್ತು ಓದುವ ನಿಮ್ಮ) ಅವಸ್ಥೆಯಾದರೂ ಏನಾಗಬಹುದು? ಸಾಹಿತ್ಯಾಭಿರುಚಿಯು ಪುಸ್ತಕಗಳ ಬಾಹ್ಯಾಂಗಗಳನ್ನು ನೋಡುವುದರಲ್ಲೇ ಕೊನೆಗೊಳ್ಳುವುದು. (ತಿಪ್ಪಾ ಭಟ್ಟರ ಈ ತತ್ವವು ಈಗಾಗಲೇ ಕರ್ನಾಟಕದಲ್ಲಿ ಜಾರಿಗೆ ಬಂದಿದೆ. ವಿಮರ್ಶೆ ಮಾಡುವವರು ಶಿರೋನಾಮೆಗಳನ್ನು ಮಾತ್ರ ಓದಿ "ಪುಸ್ತಕದ ಬಾಹ್ಯಾಂಗದಂತೆಯೇ ಎಲ್ಲಾ ಅಂಗಗಳು ಉತ್ತಮವಾಗಿವೆ" ಎನ್ನುವುದು ಈಗಿನ ರೂಢಿಯಾಗಿರುವುದರಿಂದ ಶ್ರೀ. ಭಟ್ಟರ ತತ್ವದ ಒಂದಂಶವು ಜಾರಿಗೆ ಬಂದಂತೆಯೇ ಸರಿ.) ಆದರೆ ಯಾರೂ ಓದುವ ತೊಂದರೆಗೊಳಗಾಗಲಿಕ್ಕಿಲ್ಲ. ಮುಂದೆ ವಿಮರ್ಶೆಯೆಂದರೆ ಕೇವಲ ಹಾಸ್ಯವಾಗುವುದು. ಮಾನವ ಜಾತಿಯ ಬುದ್ಧಿಶಕ್ತಿಯ ಬುಡಕ್ಕೆ ಕೊಡಲಿಯಿಕ್ಕಿದಂತಾಗುವುದು.

೦೦

ಕನ್ನಡ ಸಾಹಿತ್ಯದಲ್ಲಿ ನನಗೆ ನಿಜವಾದ ಅಭಿರುಚಿಯಿದೆ. ಆದರೆ ನಾನು ಸೇವೆಯ ಕುರಿತು ಮಾತಾಡುವಾಗ ಈಗಿನ ಹುಡುಗರು ಷೇವ್ ಎಂದರೆ (Shave) ಕ್ಷೌರ ಎಂಬ ಅರ್ಥವನ್ನು ಮಾಡಿಕೊಳ್ಳುವುದುಂಟು. ಇರಲಿ. ನನ್ನ ವಿಚಾರ ಹೇಳುವುದಿದ್ದರೆ ನನಗೆ ಹಳೆ ಸಾಹಿತ್ಯದಲ್ಲಿ ತುಂಬಾ ಅಭಿಮಾನ. ಆದರೆ ನಾನು ಬಹಿರಂಗವಾಗಿ ಹಾಗೆ ಹೇಳಿದರೆ ಮೂಲೆಪಾಲಾಗುವುದು ಖಚಿತವೆಂದು ಆ ಗೊಡವೆಗೆ ಹೋಗುವುದಿಲ್ಲ. ಸರಿ. ಶ್ರೀ. ತಿಪ್ಪಾ ಭಟ್ಟರ ವಿಧಾನವು ಜಾರಿಗೆ ಬಂದರೆ, ಜಗತ್ತೇ ಅಡಿಮೇಲಾಗುವುದೆಂದು ನನ್ನಭಿಮತ. ರಸ್ತೆಗಳಲ್ಲಿ ಪುಸ್ತಕಗಳು ತುಂಬಿ ಹೋಗುವವು. ಬೇಂಕುಗಳಲ್ಲಿ ಇಲಿಗಳೇ ಕಾಣಿಸಿಕೊಳ್ಳುವವು, ಇದು ಅತಿಶಯೋಕ್ತಿಯೆಂದು ಭಾವಿಸಬೇಡಿ. ಹೇಗೂ ಇರಲಿ. ಕಾಲದೊಡನೆ ನಾವು ಕೂಡಾ ಬದಲಾಗಬೇಕಾಗಿದೆ.

೦೦

ಒಟ್ಟಿನಮೇಲನ್ನುವುದಿದ್ದರೆ ಶ್ರೀ. ತಿಪ್ಪಾ ಭಟ್ಟರ "ಹಿರಿಯರಿಗೊಂದು ಮಾತು" ಎಂಬ ಲೇಖನವನ್ನು ಕನ್ನಡಿಗರು ಮೆಚ್ಚುವಂತಿದೆ. ಇದನ್ನು ಎಲ್ಲರೂ ಅನುಕರಿಸಿದರೆ ಸಾಹಿತ್ಯದ ಉದ್ಧಾರವಾಗುವುದಲ್ಲದೆ, ಪ್ರಕಾಶಕರ ಭಾಗ್ಯರವಿಯು ಉತ್ತುಂಗದಲ್ಲುದಯಿಸುವನು. ಹೊಸಕ್ರಮಕ್ಕನುಸಾರವಾಗಿ ನನ್ನ ಗಿಳಿಗೂ ಕೂಡಾ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಬೇಕೆಂಬ ಇಚ್ಛೆಯು ನನಗಿದೆ. ಅದರ ಕೊಕ್ಕನ್ನು ಸಾಬೂನಿನಿಂದ ತೊಳೆದು "ಸಾಹಿತ್ಯ ದರ್ಪಣ"ದ ಮೇಲೆ ಇಟ್ಟು "ಚಂದ, ಚಂದ, ಸುಂದರ ಪುಸ್ತಕ"ವೆಂದು ಹೇಳಿ ಅಭ್ಯಾಸ ಮಾಡಿದರೆ ಅದು ತನ್ನ ಕೊಕ್ಕಿನಿಂದ ಆದರ ಕೊನೆಯ ಪುಟ ತೂತಾಗುವ ತನಕ ಬಿಡುವುದು. ಇದಕ್ಕಿಂತ ಹೆಚ್ಚಿನ ಸಾಹಿತ್ಯಾಭಿರುಚಿಯು ಬೇರೊಂದಿದೆಯೇ? ಈ ಕ್ರಮವನ್ನು ಕನ್ನಡಿಗರೆಲ್ಲರೂ ಅನುಕರಿಸಿದರೆ ಕನ್ನಡ ಸಾಹಿತ್ಯವು ಉದ್ಧಾರವಾಗುವುದರಿಂದ ಮಕ್ಕಳಿಗೆ ಚಿಕ್ಕಂದಿನಲ್ಲಿಯೇ ಈ ಇದನ್ನು ಕಲಿಸಿದರೆ ಎಷ್ಟು ಉಪಕಾರವಾಗಬಹುದೆಂದು ಪ್ರತ್ಯೇಕ ಹೇಳಬೇಕೆ?

---

ನನಗರಿಯದು, ನಿಮಗೆ-



ಬೆಲೆ ಕಟ್ಟುವುದಕ್ಕೆ
ಹಗ್ಗ ಬೇಕೆ?



# ಸಾಮ್ರಾಜ್ಯಗಳನ್ನು ನಡುಗಿಸುವ ಹಿಟ್ಲರನು ಒಬ್ಬ ತರುಣಿಗೆ ಬೆದರುತ್ತಿದ್ದಾನೆ!



## ಅವಳ ಶಿರಚ್ಛೇದನಕ್ಕೆ ಸಾವಿರಾರು ಕತ್ತಿಗಳು ಸಿದ್ಧವಾಗಿವೆ

## ಹಿಟ್ಲರನ ಗುಪ್ತ ಸೈನ್ಯವಾದ ಜೆಸ್ಟೆಪೊವನ್ನೂ ಸೋಲಿಸಿದಳು!



೨೬ ವರುಷದ ತರುಣಿಯೊಬ್ಬಳ ಚಟುವಟಿಕೆಗಳಿಂದ ದಿಙ್ಮೂಢನಾಗಿರುವ **ಹೆರ್ ಹಿಟ್ಲರ್.**

ಇಪ್ಪತ್ತಾರು ವರುಷ ಪ್ರಾಯದ ಒಬ್ಬ ತರುಣಿ ನಿರ್ಭಯವಾಗಿ ಹಿಟ್ಲರನ ನಾಝೀ ರಹಸ್ಯಗಳನ್ನು ಬಯಲುಮಾಡುತ್ತಿದ್ದಾಳೆ. ಈಕೆಯನ್ನು ಸೆರೆಹಿಡಿಯುವುದಕ್ಕಾಗಿ ಶತಪ್ರಯತ್ನಗಳಾಗುತ್ತಿವೆ.

**ಶಿರಚ್ಛೇದನಕ್ಕಾಗಿ ಹುಡುಕುತ್ತಿದ್ದಾರೆ.**

ಸಮಗ್ರ ಯುರೋಪಿನಲ್ಲಿ ಹಿಟ್ಲರನು ಈಕೆಯಷ್ಟು ಇನ್ನಾರಿಗೂ ಬೆದರುವುದಿಲ್ಲ. ಜರ್ಮನಿಯ ಭಯಂಕರ ಗುಪ್ತಸೈನ್ಯವಾದ ೨೦೦ ಮಂದಿಯನ್ನೊಳಗೊಂಡ "ಜೆಸ್ಟೆಪೊ," ಹೆರ್ ಹಿಟ್ಲರನ ಧುರೀಣತ್ವದಲ್ಲಿ ಡಾನ್ಝಿಗ್ ಎಂಬಲ್ಲಿಗೆ ತೆರಳಿ ಆಕೆಯನ್ನು ಸೆರೆಹಿಡಿಯಲೆತ್ನಿಸಿದರು. ಆಕೆಯು ದೊರಕಿದ ೨೪ ತಾಸುಗಳೊಳಗಾಗಿ ಶಿರಚ್ಛೇದನವಾಗುವದೆಂದು ಹಿಟ್ಲರನೇ ಹೇಳಿದ್ದಾನೆ.

.ʊ.

ಕಳೆದವಾರ ಡಾನ್ಝಿಗಿನಲ್ಲಿ ಜನರು ತಮ್ಮ ರೇಡಿಯೊಗಳಲ್ಲಿ ಕೋಮಲ ಸ್ವರವೊಂದನ್ನು ಕೇಳಿದರು. ಆಕೆಯ ಸ್ವರದಲ್ಲಿ ಧೈರ್ಯದ ಲಕ್ಷಣಗಳಿದ್ದುವು. ಕಳೆದ ವರುಷ ಡಾನ್ಝಿಗಿನಿಂದಲೇ ಜರ್ಮನಿಯ ಭಯಾನಕ ಡಾಚ್ಟೋ ಸೆರೆಮನೆಗೆ ೮,೪೪೪ ಮಂದಿ ಕಳುಹಿಸಲ್ಪಟ್ಟಿರುವರೆಂದು ಆಕೆಯು ಕೆ ಪಳು. ೩,೦೦೦ಕ್ಕಿಂತಲೂ ಹೆಚ್ಚಿದ ಜನರು ಡಾನ್ಝಿಗಿನಿಂದ ಮಾಯವಾಗಿದ್ದಾರೆಂದು ಆ ತರುಣಿಯು ಹೇಳಿದ್ದಾಳೆ.

.ʊ.

ಹೆರ್ ಹಿಟ್ಲರನು ಸ್ವತಹ ಹೋಗಿ, ಆಕೆಯನ್ನು ಕಂಡುಹಿಡಿಯಬೇಕೆಂಬ ಆಜ್ಞೆಯನ್ನು ಹೆರ್ ಹಿಮ್ಲರನಿಗಿತ್ತಿದ್ದಾನೆ. ಜರ್ಮನಿಯಲ್ಲಿ ಜನರು ಯಾರ ಹೆಸರನ್ನು ಕೇಳಿದೊಡನೆ ಬೆದರಿ ನಡುಗುವರೊ ಆ ಹೆರ್ ಹಿಟ್ಲರನಿಗೆ ಬೆದರದೆ, ಬೈದು ಭಂಗಿಸಿ ಅವನ ಗುಟ್ಟುಗಳನ್ನು ರಟ್ಟುಮಾಡುತ್ತಿರುವ ಆ ತರುಣಿಯನ್ನು ಸೆರೆಹಿಡಿಯಲು ಸಾವಿರಾರು ವಿಧದ ಯತ್ನಗಳಾಗುತ್ತಿವೆ.

.ʊ.

**ಸೇಡು! ಸೇಡು! ಸೇಡು!**

ಈ ತರುಣಿಯು ಬೆವೇರಿಯದವಳು. **ಅತ್ಯಂತಭಯಾನಕವಾದ ಡಾಚ್ಟೋ ಸೆರೆಮನೆಯಲ್ಲಿ ಆಕೆಯ ಪ್ರಣಯಿಯನ್ನು ಕೊಂದಿರುವ** ಸೇಡನ್ನು **ತೀರಿಸುವುದಕ್ಕಾಗಿ** ಆಕೆಯು **ರೇಡಿಯೊದಮೂಲಕ** ಪ್ರಚಾರಕಾರ್ಯವನ್ನು **ನಡೆಸುತ್ತಿ**ದ್ದಾಳೆ.

.ʊ.

### ನಿಂತಲ್ಲಿ ನಿಲ್ಲುವುದಿಲ್ಲ.

ಬ್ರಾಡ್‌ಕಾಸ್ಟ್ ಮಾಡುವ ಸ್ಟೇಶನು ಯಾವುದೋ ಒಂದು ವಾಹನದೊಳಗಿದೆಯೆಂದು ಜೆಸ್ಟೈಪೊ ಸೈನ್ಯದವರಿಗೆ ಗೊತ್ತಿದೆ. ಅದು ಮೂರು ತಾಸಿಗಿಂತ ಹೆಚ್ಚು ಎಲ್ಲಿಯೂ ನಿಲ್ಲುವುದಿಲ್ಲ.

### ಮೂರುಸಾವಿರ ಪೋಲೀಸರು.

ಮೊದಲನೆಬಾರಿ ಬ್ಲೇಕ್ ಫೋರೆಸ್ಟ್ ಎಂಬಲ್ಲಿಂದ ಆಕಾಶವಾಣಿಯು ಕೇಳಿಸಿತು ಒಂದು ವಾರದತನಕ ಇದೇ ಕತೆಯು ನಡೆಯುತ್ತಾ ಬಂತು. ವಾರದಂತ್ಯವಾಗುವಾಗ ಮೂರುಸಾವಿರ ಪೋಲೀಸರೂ ೩೦ ಜೆಸ್ಟೈಪೊ ಏಜಂಟರೂ ಆ ಸ್ಥಳವನ್ನು ಮುತ್ತಿದರು.

### ಮಾಯವಾಯಿತು.

ಅಷ್ಟುಮಂದಿ ಇಡೀರಾತ್ರಿ ಹುಡುಕಿದರು. ಎಲ್ಲಿ ಹುಡುಕಿದರೂ ಒಂದಿಷ್ಟು ಸಂಜ್ಞೆಯು ಕಾಣಿಸಲಿಲ್ಲ. ವಾಹನವು ಮಾಯವಾಯಿತು. ಹಿಟ್ಲರನ ಅಪಪ್ರಚಾರದ ಆಕಾಶವಾಣಿಯು ಜರ್ಮನಿಯ ಎಲ್ಲಾ ಭಾಗಗಳಿಂದಲೂ ಕೇಳಿಸುತ್ತಿದೆ. ಆದರೆ ಹಿಟ್ಲರನಿಗೆ ಅದರ ರಹಸ್ಯವನ್ನು ಕಂಡುಹಿಡಿಯಲು ಸಾಧ್ಯವಾಗಲಿಲ್ಲ.

### ೫೦೦೦ ಪವನುಗಳ ಬಹುಮಾನ.

ಈ 'ಮಾಯಾವಿನಿ'ಯನ್ನು ಕಂಡುಹಿಡಿದವರಿಗೆ ೫೦೦೦ ಪವನುಗಳನ್ನು ಬಹುಮಾನವಾಗಿ ಕೊಡಲಾಗುವುದೆಂದು ಹಿಟ್ಲರನು ಡಂಗುರ ಹೊಡೆಸಿದ್ದಾನೆ. ಈಗಾಗಲೇ ಬೇಟೆ ನಾಯಿಗಳು ಆಕೆಯನ್ನು ಕಂಡುಹಿಡಿಯುವ ಕೆಲಸದಲ್ಲಿ ನಿರತವಾಗಿವೆ. ಜರ್ಮನಿಯ ಪ್ರಸಿದ್ಧ ವೈಜ್ಞಾನಿಕರು ಆಕೆಯಿರುವ ಸ್ಥಳವನ್ನು ಕಂಡುಹಿಡಿಯಲು ಶಕ್ತಿಮೀರಿ ಯತ್ನಿಸುತ್ತಿದ್ದಾರೆ.

### ಕೊಡಲಿಯ ಭಯ.

ಈಗ ಕೂಡಾ ಪ್ರತಿ ವಾರದ ಅಂತ್ಯಕ್ಕೆ ಆಕೆಯು "ನಾನು ಇನ್ನೂ ಒಂದುವಾರ ನಿರ್ಭಯವಾಗಿ ಸತ್ಯವನ್ನಾಡಿದ್ದೇನೆ. ನೀವು ಕೇಳಿರುವುದನ್ನು ಎಂದಿಗೂ ಮರೆಯಬೇಡಿರಿ. ಮುಂದಿನವಾರ ನನ್ನ ಕೊರಳಿಗೆ ಕೊಡಲಿಯಿಕ್ಕಬಹುದು."

### ಹಿಟ್ಲರನಿಗೆ ಪತ್ರ.

ಅವರು ಡಾನ್ಝಿಗಿನಲ್ಲಿ ಹುಡುಕಿ ನಿರಾಶರಾದೊಡನೆ ಆಕೆಯು ಹಿಟ್ಲರನಿಗೆ ಒಂದು ಪತ್ರವನ್ನು ಬರೆದಳು. ಅವನು ಹೊಸ ಆಜ್ಞೆಯನ್ನು ಹೊರಡಿಸುವುದೇ ತಡ. ಆಕೆಯ ಪತ್ರವು ಬಂದೇ ಬರುತ್ತದೆ. ಪತ್ರಗಳಲ್ಲಿ ಪ್ರತಿಬಾರಿ ಹದಿಮೂರು ಶಬ್ದಗಳಿರುತ್ತವೆ. "ನನ್ನ ಪ್ರಣಯಿಯನ್ನು ಕೊಂದಿರುವಿ. ನಾನು ಜರ್ಮನಿಯು ಸ್ವತಂತ್ರವಾಗುವತನಕ ಬದುಕುವೆನಲ್ಲದೆ ಇದೇ ರೀತಿಯಲ್ಲಿ ಪ್ರಚಾರಕಾರ್ಯವನ್ನು ನಡೆಸುತ್ತಾ ಬರುವೆನೆಂಬುದು ಖಂಡಿತವೆಂದು ತಿಳಿಯಿರಿ."

---

# ಅಂತರಂಗದ ಸುದ್ದಿಗಳು

ಅಂತರಂಗದ ವಿಶೇಷ ಪ್ರತಿನಿಧಿಯ ಗುಟ್ಟಿನ ಡೈರಿಯ ಪೂರ್ಣ ನಿರಾಧಾರವಾದ ಸುದ್ದಿಗಳು. ಓದಿ ಗಡಿಬಿಡಿ ಮಾಡಿದರೆ ಯಾರೂ ಜವಾಬ್ದಾರರಲ್ಲ

**ಭಾರತಕ್ಕೆ ಡ್ಯೂಕ್ ಆಫ್ ವಿಂಡ್ಸರ್.**

ಡ್ಯೂಕ್ ಆಫ್ ವಿಂಡ್ಸರರು ಸಪತ್ನೀಕರಾಗಿ ೧೯೩೯ನೇ ಜನವರಿ ೧೬ರಂದು ಭಾರತಕ್ಕೆ ಬರುವರಂತೆ.

□

**ಶಿಸ್ತಿನ ಜಾರಿ.**

ಶ್ರೀ. ಕೆ. ಬಿ. ಜಿನರಾಜ ಹೆಗ್ಡೆ ಎಮ್. ಎಲ್. ಎ (ಢಿಲ್ಲಿ) ಇವರು ಕೇರಳದ ಶ್ರೀ. ಮೆನೊನರ ಉಮೇದ್ವಾರಿಕೆಯ ‹‹ಯೋಗ್ಯತೆ”ಯನ್ನು ಅಲ್ಲಗಳೆದಿರುವರೆಂದು (?) ಅವರ ಮೇಲೆ ಶಿಸ್ತಿನ ಜಾರಿಮಾಡಲು ದಕ್ಷಿಣಕನ್ನಡ ಜಿಲ್ಲಾಕಾಂಗ್ರೆಸ್ ಕಮಿಟಿಯವರು ಸರ್ದಾರ್ ಪಟೇಲರಿಂದ ಅಪ್ಪಣೆಯನ್ನು ತರಿಸಿರುವರಂತೆ. ಶಿಸ್ತು ಸದ್ಯದಲ್ಲಿಯೇ ಜಾರಿಯಾಗಿ ಬಿಡುವುದಂತೆ.

□

**ಹೊಸ ಗ್ರಂಥಗಳು.**

ಕರ್ನಾಟಕದ ಪ್ರಸಿದ್ಧ ಪತ್ರಿಕೋದ್ಯಮಿಗಳಾದ ಶ್ರೀ. ಹಿ. ರಾ. ಮಲ್ಯರು ಸದ್ಯದಲ್ಲಿಯೇ ‹‹ಪತ್ರಿಕೆಗಳ ಶಿಷ್ಟಾಚಾರ” ಮತ್ತು ‹‹ಕಮಲಾದೇವಿಯರ ಜೀವನ ಚರಿತ್ರೆ” ಯೆಂಬೆರಡು ಪುಸ್ತಕಗಳನ್ನು ಪ್ರಕಟಿಸುವರಂತೆ. ‹‹ಸಮತಾವಾದದ ಪ್ರಯೋಜನ”ವೆಂಬ ಪುಸ್ತಕದ ಕೆಲಸವನ್ನು ಕೂಡಾ ಅವರು ಪ್ರಾರಂಭಿಸಿರುವರೆಂದು ವಾರ್ತೆ ಹಬ್ಬಿದೆಯಂತೆ.

□

**ವಿಶ್ವಾಮಿತ್ರ ಸೃಷ್ಟಿ.**

ಸರ್ದಾರ್ ಪಟೇಲರನ್ನು ಕಾಂಗ್ರೆಸಿನಿಂದ ಹೊರಗೆ ಹಾಕದಿದ್ದರೆ ತಾವು ಪ್ರತ್ಯೇಕವಾದ ಹೊಸಸಂಸ್ಥೆಯನ್ನು ಸ್ಥಾಪಿಸಿ ಕಾಂಗ್ರೆಸನ್ನು ಧೂಳಿಧೂಸರ ಮಾಡಿಬಿಡುತ್ತೇವೆಂದು ಸಮತಾವಾದಿಗಳು ಕಾಂಗ್ರೆಸ್ ಅಧ್ಯಕ್ಷರಿಗೆ ಬೆದರಿಕೆ ಹಾಕಿದ್ದಾರಂತೆ. (ಇದಕ್ಕೆ ಡಾ| ಖರೆಯವರ ಪಕ್ಷದವರೂ ಪೂರ್ಣ ಬೆಂಬಲವನ್ನೀಯುವುದಾಗಿ ಭರವಸೆ ಕೊಟ್ಟಿದ್ದಾರಂತೆ.)

□

**ಖಂಡನೆ.**

ಮಧ್ಯಪ್ರಾಂತ್ಯ ಸರಕಾರದವರು ಗಾಂಧಿಜಿಯವರನ್ನು ಸಂಬೋಧಿಸುವಾಗ ‹‹ಮಹಾತ್ಮಾ” ಎಂದುಪಯೋಗಿಸಬೇಕೆಂದು ಅಧಿಕಾರಿಗಳಿಗೆ ಆಜ್ಞೆಯಿತ್ತುದನ್ನು ಖಂಡಿಸಿ, ಮುಂದೆ ಅಂತಹ ಅಂಧಶ್ರದ್ಧೆಯ ಶಬ್ದಗಳನ್ನುಪಯೋಗಿಸಬಾರದೆಂದು ಅಖಿಲಭಾರತ ಸಮತಾವಾದಿ ಪಕ್ಷದವರು ನಿರ್ಣಯ ಮಾಡಲಿರುವರಂತೆ.

□

**ವಿದುರಾಶ್ವತ್ಥದ ಫಲಿತಾಂಶ.**

ಸರ್ ಮೀರ್ಜಾ? ರಮೇಶಮ್‌ರವರ ವಿದುರಾಶ್ವತ್ಥ ವಿಚಾರಣೆಯ ವರದಿಯನ್ನು ಮನ್ನಿಸಿ ಮೈಸೂರು ಸರಕಾರವು ವಿದುರಾಶ್ವತ್ಥದ ಗೋಳಿಬಾರಿಗೆ ಹೊಣೆಗಾರರಾದ ಎಲ್ಲಾ ಅಧಿಕಾರಿಗಳನ್ನು ಕೆಲಸದಿಂದ ನಿವೃತ್ತಿಪಡಿಸುವರೆಂದು ನಿರೀಕ್ಷಿಸಲಾಗಿದೆಯಂತೆ.

□

**ತಿರುವಾಂಕೂರಿಗೆ ಹೊಸ ದಿವಾನರು.**

ತಿರುವಾಂಕೂರಿನ ಈಗಿನ ದಿವಾನರಾದ ಸರ್. ಸಿ. ಪಿ. ರಾಮಸ್ವಾಮಿ ಐಯ್ಯರ್‌ರವರ ಬದಲು ರೈಟ್ ಆನರೇಬಲ್ ಶ್ರೀನಿವಾಸ ಶಾಸ್ತ್ರಿಯವರನ್ನು ನೇಮಿಸುವರೆಂದು ತಿಳಿಯಲಾಗಿದೆಯಂತೆ.

□

**ಕಾಂಗ್ರೆಸಿನ ಹೊಸ ನಿಯಮ.**

ಢಿಲ್ಲಿಯಲ್ಲಿ ಜರಗುವ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯಲ್ಲಿ ಸತ್ಯ ಮತ್ತು ಅಹಿಂಸೆಯನ್ನು ನಂಬದ ಕಾಂಗ್ರೆಸ್ ಸದಸ್ಯರು ಕಾಂಗ್ರೆಸಿನಿಂದ ಹೊರಗೆ ಹೋಗಬೇಕೆಂಬ ನಿಯಮವು ಮಂಜೂರಾಗುವುದೆಂನು ವಿಶ್ವಸನೀಯವಾಗಿ ತಿಳಿದು ಬಂದಿದೆಯಂತೆ.

□

# ತಲೆಯು ಹೊಟ್ಟೆಯಲ್ಲಿರಬೇಕು!

(ನಗೆ ಬರಹ)

ಬರೆದವ:

"ನಿಟ್ಟು"

ಹೌದು. ತಲೆಯು ಹೊಟ್ಟೆಯಲ್ಲಿಲ್ಲವಾದುದರಿಂದ ಇಷ್ಟೆಲ್ಲಾ ಅನಾಹುತಗಳಾಗುತ್ತಿವೆ. ದೂರ ದೂರವಿದ್ದು ಎಷ್ಟು ವ್ಯವಹಾರ ನಡೆಸಿದರೂ ಅಷ್ಟೆ ವರ್ಕಿಂಗ್ ಕಮಿಟಿ ಸಭೆಗೇ ಹೋಗಿ ಗಾಂಧಿಯವರು ಆಲೋಚನೆ ಕೊಡುವದೇಕೆ? ವಾರ್ಧದಲ್ಲಿದ್ದುಕೊಂಡು ಆಲೋಚನೆ ಕೊಟ್ಟರೆ ಆಗಬೇಕಾದಷ್ಟು ಆಗುವದಿಲ್ಲವೆಂದಲ್ಲವೆ? ಆದರೆ ನಾವೀಗ ಮಾಡುವದೇನು? ಹಾಗೆ ತಲೆಯನ್ನು ಹೊಟ್ಟೆಯಲ್ಲಿಡಲು ಸಾಧವಿರುತ್ತಿದ್ದರೆ ನಮ್ಮ ಜಮೀನ್ದಾರ ವೀರಭದ್ರಪ್ಪನವರು ಅಷ್ಟು ಪೇಚಾಟ ಪಡಬೇಕಿತ್ತೆ? ಕೊನೆಗೆ ಸಿದ್ಧಪ್ಪ ಪಂಡಿತರು ಉಪಾಯವಿಲ್ಲದೆ ತನ್ನ ತಲೆಯನ್ನು ವೀರಭದ್ರಪ್ಪನವರ ಹೊಟ್ಟೆಯಲ್ಲಿಟ್ಟುದರಿಂದಲ್ಲವೆ ತಲೆಗೆ ಬಂದ ಆಪಾಯ ಮೊಣಕಾಲಿಗಿಳಿಯುವಂತಾದುದು. ಆ ಕತೆ ನಿಮಗೆ ಗೊತ್ತಿರಲಿಕ್ಕಿಲ್ಲ. ಸ್ವಾರಸ್ಯವಿದೆ, ಕೇಳಿ.

ಸಂಯುಕ್ತ ಪ್ರಾಂತ್ಯದ ಶ್ರೀಮತಿ ವಿಜಯ ಲಕ್ಷ್ಮಿ ಪಂಡಿತರು ಆಯುರ್ವೇದ, ಯುನಾನಿ ಮೊದಲಾದ ದೇಶೀಯ ವೈದ್ಯರಿಗೆ ಪ್ರೋತ್ಸಾಹಕೊಡುವ ಮಸೂದೆ ತಂದು ಅದು ಕಾನೂನಾಗಿದೆ. ನಮ್ಮ ಪ್ರಾಂತ್ಯದಲ್ಲಿ ಅದರ ಆಗತ್ಯ ಈಗ ಉಳಿದಿಲ್ಲ. ಸಾಲನಿವಾರಣಾ ಕಾನೂನಿನಿಂದಾಗಿ ಸಾಲ ಕೊಟ್ಟ ಹಲವು ಧನಿಕರಿಗೆ ಉಂಡ ಅನ್ನ ಕರಗದೆ, ಅಜೀರ್ಣವ್ಯಾಧಿ ತಲೆದೋರಿ ಎಲ್ಲೆಲ್ಲಿಯೂ ಯುನಾನಿ ವೈದ್ಯರಿಗೆ ಪ್ರೋತ್ಸಾಹ ದೊರಕುತ್ತಿರುವಂತೆ! ಇನ್ನೊಂದು ಕಾನೂನು ಮಾಡಿ ಕಾಯಿದೇ ಮುರಿದಿದ್ದ ಕಾಂಗ್ರೆಸಿನವರೇ ಕಂಡಾಬಟ್ಟೆ ಕಾನೂನು ಮಾಡಿ ಹಾಕಿದರೆಂಬ ಅಪವಾದವೇಕೆ? ಹೀಗೆ ಅಜೀರ್ಣವ್ಯಾಧಿ ತಲೆದೋರಿದವರಲ್ಲಿ ಜಮೀನ್ದಾರ್ ವೀರಭದ್ರಪ್ಪನವರೊಬ್ಬರು. ಅವರದು ಬೊಜ್ಜು ಬೆಳೆದ ಹೊಟ್ಟೆ. ಸಾಲ ಕೊಂಡು ಹೋದವರು ಆಗಾಗ ತಂದುಕೊಡುತ್ತಿದ್ದ ಸೂರಣ್ಣಗಡ್ಡೆ, ಬಾಳೆಗೊನೆ, ಕೋಳಿಮರಿ ತಿಂದೇ ಬೆಳೆದ ಹೊಟ್ಟೆ. ಆ ಹೊಟ್ಟೆಯಲ್ಲಿಯೇ ತಲೆಯಿರುತ್ತಿದ್ದರೆ (ಅದನ್ನು ಇನ್ನೂ ಇನ್ನೂ ಹೇಳಿ ಫಲವಿಲ್ಲವೆನ್ನಿ) ಈ ಕಾನೂನು ಬರಬಹುದೆಂಬ ನಿರೀಕ್ಷೆಯಿರುವಾಗಲೇ ಆ ಸಾಲಿಗರ ಬಾಳೆತೋಟ ಸೂರಣ್ಣಗಡ್ಡೆ ತೋಟಗಳನ್ನು ತನ್ನ ಹೆಸರಿಗೆ ಮಾಡಿಸಿಕೊಳ್ಳುತ್ತಿದ್ದರೆ ಅವರು ಕಾನೂನು ಬಂದಾಗ ರೈತರಲ್ಲ–ಭಿಕ್ಷುಕರು ಎನ್ನುವಂತಾಗುತ್ತಿತ್ತು; ವೀರಭದ್ರಪ್ಪನವರ ಹೊಟ್ಟೆಗೂ ಹೀಗೆ ಧಾಡಿ ಬಡೆಯುತ್ತಿದ್ದಿಲ್ಲ. ಆದರೆ ತಲೆಯು ಹೊಟ್ಟೆಯಲ್ಲಿಲ್ಲ- ವೀರಭದ್ರಪ್ಪನವರಿಗೆ ಈ ಆಲೋಚನೆ ಬರಲಿಲ್ಲ. ಕೊಟ್ಟ ಸಾಲಗಳೆಲ್ಲಾ ಕೋರ್ಟ್ ಮುಖಾಂತರ $\frac{1}{4}$ ಭಾಗ, 1/8ನೇ ಅಂಶ ತಿರುಗಿ ಬಂದವು. ಆಯ್ತುಪ್ಪಾ, ಆ ದಾಮಾಶಯದಲ್ಲಿಯಾದರೂ ಬಾಳೆಗೊನೆಯ ಬದಲಿಗೆ ಕೆಲವು ಕಾಯಿಗಳು, ಸೂರಣ್ಣಗಡ್ಡೆಯ 1/8ನೇ ತುಂಡುಗಳಾದರೂ ಬಂದವೆ? ಇಲ್ಲ, ಯಾವುದೂ ಇಲ್ಲ. ಅವರಿಗೆ ಹೇಗಾಗಬೇಕೆಂದು ನೀವೇ ಹೇಳಿ. ಇತ್ತೀಚೆಗಿ ಅನ್ನ ಕರಗದೆ ಅಜೀರ್ಣವ್ಯಾಧಿ ಪ್ರಾರಂಭವಾಗಿತ್ತು. ಮೊನ್ನೆ ಅದು ಪರಮಾವಧಿಗೆ ಬಂದು ಸಿದ್ಧಪ್ಪ ಪಂಡಿತರಿಗೆ ಜನಹೋಯಿತು. ಪಂಡಿತರು ದೊಡ್ಡ ಲೋಡಿಗೆ ಒರಗಿ ಬಿದ್ದುಕೊಂಡಿದ್ದವರು ಕೂಡಲೇ ಕೆಲವು ಮಾತ್ರೆಗಳನ್ನು ಕಟ್ಟಿಕೊಂಡು ಬಂದರು. ವೀರಭದ್ರಪ್ಪನವರ ಕಾಹಿಲೆ ಸಮಾಚಾರಗಳನ್ನು ಕೇಳಿದುದಾಯಿತು. ಮತ್ತೂ ಮತ್ತೂ ಕೇಳಿದರು. ವೀರಭದ್ರಪ್ಪನವರು ಎರಡೂ ಕೈಗಳಿಂದ ಹೊಟ್ಟೆ ಸವರಿಕೊಳ್ಳುತ್ತಾ ಮಾತಾಡುತ್ತಾರೆ ಹೊರತು ಯಾವ ಸಂಜ್ಞೆಯನ್ನು ಬೆರಳೆತ್ತಿ ಸೂಚಿಸುವುದಿಲ್ಲ. ಸೂಚಿಸತಕ್ಕ ಬೆರಳುಗಳು ಮತ್ತೂ ಮತ್ತೂ ಹೊಟ್ಟೆಯನ್ನೇ ಸೂಚಿಸುತ್ತಿವೆ. "ಆಯ್ತು, ಹೊಟ್ಟೆಯನ್ನೇ ಪರೀಕ್ಷಿಸೋಣ" ಎಂದು ಬಗ್ಗಿ ತಲೆಯನ್ನು ವೀರಭದ್ರಪ್ಪನವರ ಹೊಟ್ಟೆಯ ಮೇಲಿಟ್ಟು ಕಿವಿಗೊಟ್ಟು ಕೇಳಹತ್ತಿದರು. ಹೊಟ್ಟೆಯೇನನ್ನುತಿತ್ತು?

ಯಾಕೆ ಗೊತ್ತುಂಟೆ? ನನ್ನ ಕೆಲಸಕ್ಕಲ್ಲ, ಲೋಕದ ಸುಧಾರಣೆಗೆ. ಮನುಷ್ಯನು ಇಷ್ಟೆಲ್ಲಾ ಮಾಡುವುದು ಕೇವಲ ಹೊಟ್ಟೆಗಾಗಿ– ಎಲ್ಲಾ ಮಾಡುವದು ತಲೆಯ ಆಧಾರದಿಂದ. ಈ ವಾದಕ್ಕೂ ಅನ್ಯರ ತರ್ಕವಿರಲಾರದಷ್ಟೆ. ಹೀಗೆ ಹೊಟ್ಟೆಗಾಗಿ ತಲೆಯಿರುವುದು ಹೊರತು ಈ

ವರೆಗೂ ಹೊಟ್ಟೆಯಲ್ಲಿ ತಲೆ ಇಲ್ಲ. ತಲೆಯ ಮೇಲೊಂದು ಎದೆ, ಎದೆಯ ಮೇಲೊಂದು ಕುತ್ತಿಗೆ-ಅದರ ಮೇಲೆ ತಲೆ! ಈ ಎದೆಗೂ ಕುತ್ತಿಗೆಗೂ ಅವುಗಳ ನಡುವೆ ಬಂದು ಕುಳಿತುಬಿಡುವ ಅಗತ್ಯವೇನಿತ್ತು? ಶ್ರೀಮಾನ್ ರಾಜಾರಾವ್ ಮತ್ತು ಶ್ರೀಮತಿ ರಾಣೀಬಾಯಿರವರ ಸನ್ಮಾನಾರ್ಥವಾಗಿ ಸತ್ಕಾರ ಕೂಟವನ್ನೇರ್ಪಡಿಸಿದಲ್ಲಿ ರಾಣಿಬಾಯಿಯವರ ಒತ್ತಿನ ಎರಡು ಕುರ್ಚಿಗಳಲ್ಲಿ ಸುಂದರ ರಾಮಮೂರ್ತಿ, ಮತ್ತು ಜಡಭರತರಾಯರು ಬಂದು ಕೂತುಬಿಟ್ಟುದರಿಂದ ರಾಜಾರಾಯರು ಆಚೆಬದಿಯ ಕುರ್ಚಿಯನ್ನಲಂಕರಿಸಿದ ಗಾದೆಯಂತಾಯಿತಲ್ಲಾ ಇದು! ಈ ಅವ್ಯವಸ್ಥೆಯಿಂದಾಗಿಯೇ ಲೋಕ ಹಾಳಾಯಿತು ನೋಡಿ. ಹೇಗೆ ಹಾಳಾಯಿತು ಕೇಳುವಿರಾ? ಕೇಳಿ

ದೊಡ್ಡ ಹೊಟ್ಟೆಯವರಲ್ಲಿ ಹೋಗಿ "ನನಗೇನಾದರೊಂದು ಕೆಲಸ ಕೊಡಿಸಿ ಸ್ವಾಮಿ" ಎನ್ನುತ್ತೀರಿ. "ಹೋ! ಅಯ್ಯಪ್ಪಾ! ನನ್ನಿಂದಾಗುವ ಪ್ರಯತ್ನವನ್ನೆಲ್ಲಾ ಮಾಡುತ್ತೇನೆ" ಎನ್ನುತ್ತಾರೆ ದೊಡ್ಡೊಟ್ಟೆ ರಾಯರು. ಹೊಟ್ಟೆಗೂ ತಲೆಗೂ ಅಷ್ಟು ಹತ್ತಿರದ ಸಂಬಂಧವಿರುವದರಿಂದಲೇ ಹೊಟ್ಟೆಯಂತಹ ದೊಡ್ಡ ದೊಡ್ಡ ಮಾತುಗಳೇ ಬಾಯಿಯಿಂದಲೂ ಬರುತ್ತವೆ. ಆದರೆ ಅವುಗಳ ನಡುವೆ ಉಂಟಲ್ಲಾ ಎದೆ. ನಾನು ಆದಿಯಲ್ಲಿಯೇ ಹೇಳಿದಂತೆ ಅದು ಸಂಬಂಧವಿಲ್ಲದೆ ಬಂದು ಕೂತುಬಿಟ್ಟಿದೆ. ಎಬ್ಬಿಸುವದು ಸಾಧ್ಯವೆ? ಅದರ ಯೋಜನೆ ಹೇಗೆ "ಈ ಗರೀಬರಿಗೆಲ್ಲಾ ಕೆಲಸ ಕೊಡಿಸುವ ಒದ್ದಾಟ ಯಾವುದಕ್ಕಾಗಿ? ಹೊಟ್ಟೆಗಿಲ್ಲದೆ ಸತ್ತರೆ ಯಾರಿಗೇನು?" ಹೊಟ್ಟೆ ಮತ್ತು ಬಾಯಿಯನ್ನು ನಂಬಿಕೊಂಡು, ವಿಜಾತೀಯ ಹೃದಯವನ್ನರಿಯದೆ, ಎಷ್ಟು ಮಂದಿ ಮೋಸ ಹೋಗುವದಿಲ್ಲ! ತಲೆಯು ಹೊಟ್ಟೆಯಲ್ಲಿರುತ್ತಿದ್ದರೆ ಎದೆಯ ಈ ವಹಿವಾಟಿಗೆ ಅನುಕೂಲವೆಲ್ಲಿ ಇತ್ತು?

ಅದು ಹಾಗಾಯಿತಲ್ಲಾ; ಇನ್ನು ಹೊಟ್ಟೆಯಲ್ಲಿಯೇ ತಲೆಯಿರುತ್ತಿದ್ದರೆ ಬಡವನಿಗೆ ಇನ್ನೊಂದು ರೀತಿಯಲ್ಲಿಯೂ ಉಪ ಹೊಟ್ಟೆಯ ಪಾಡಿಗೆ



ವೀರಭದ್ರಪ್ಪನವರ ಹೊಟ್ಟೆಯಲ್ಲಿ ಸಿದ್ಧಪ್ಪ ಪಂಡಿತರ ತಲೆ!

ಕಾರಣವಿತ್ತು.

ಬೇಕಾಗುವದನ್ನು ಮಾಡುವ ಕೆಲಸ ತಲೆಯ ಪಾಲಿಗೆ ಮಾತ್ರ ಬೀಳುತ್ತಿತ್ತು. ಆದುದರಿಂದ ಸಾಧ್ಯಾಸಾಧ್ಯತೆಯನ್ನು ವಿಚಾರಿಸಿ ಅದು ಸರಿಯಾದ ಹಾದಿಯನ್ನೇ ಹಿಡಿಯುತ್ತಿತ್ತು. ಹೊಟ್ಟೆ ಮತ್ತು ತಲೆಯ ನಡುವೆ ಆದೊಂದುಂಟಲ್ಲಾ ಕುತ್ತಿಗೆ ಅದಕ್ಕೇನು ಗೊತ್ತಿದೆ ಈ ವಿಷಯ? ಸಂಬಂಧವಿದ್ದರಲ್ಲವೇ ಗೊತ್ತಿರಬೇಕು? ದೊಡ್ಡವರ ವೈಖ

ವವನ್ನು ಕಂಡು ಆಶೆಯಿಂದ ಉದ್ದವಾಗುವುದೆಂದು ಗೊತ್ತಿದೆ. ಧನಿಕರಲ್ಲಿ ಹೋಗಿ ಹೋಗಿ ಈ ಕುತ್ತಿಗೆ ಅಡ್ಡ ಹಾಕಿದರಾಯಿತು-ಬಿಟ್ಟಿ ಮಾಡಿ ಸಾಯುವುದೊಂದೇ ಗತಿ. ಹೀಗೆ ಬಡವರಲ್ಲಿಯೂ ದೊಡ್ಡವರಲ್ಲಿಯೂ ಹೊಟ್ಟೆ ತಲೆಗಳ ನಡುವೆ, ಎದೆ, ಕಂಠಗಳು ಬಂದು ಕೂತುಕೊಂಡಿರುವದುಂಟಲ್ಲಾ-ಇದು ಬಡವನ ಅಂತ್ಯಕ್ಕೆ!

ಇನ್ನೊಂದು ವಿಧದಲ್ಲಿ ನೋಡಿ "ಹೊಟ್ಟೆಯೊಳಗುಂಟು; ಬಾಯಿಗೆ ಬರುವುದಿಲ್ಲವಲ್ಲಾ'' ಎಂದು ನಾವು ಕೆಲವೊಮ್ಮೆ ಪೇಚಾಡುವದುಂಟು. ಮಧ್ಯದಲ್ಲಿ ತಡೆಯುವ ಎದೆ, ಕುತ್ತಿಗೆಯಿಲ್ಲದಿರುತ್ತಿದ್ದರೆ ಬಾಯಿಗೆ ಬಾರದೆ ಮತ್ತೆಲ್ಲಿ ನಿಂತೀತು? ಮೊನ್ನೆ ಗೌರಿ ಮತ್ತು ಗಣಪಯ್ಯ ಹೋಗುವಾಗಿ ಕುಂಞಣ್ಣ ಕಣ್ಣುಸನ್ನೆ ಮಾಡಿದನಲ್ಲಾ, ಗಣಪಯ್ಯ ಅದನ್ನು ಕಂಡೂ ಕಾಣದಂತೆ ಮಾಡಿಕೊಂಡು ಹೋದನಲ್ಲಾ,-ಅವನಿಗೇನು ಮರ್ಯಾದೆ ಇಲ್ಲವೆಂದು ನೆನಸಿದಿರಾ? ಇತ್ತು. "ಇನ್ನೊಮ್ಮೆ ಕಣ್ಣಸನ್ನೆ ಮಾಡು; ನಿನ್ನ ಕಣ್ಣು ಕುಕ್ಕಿ ಬಿಡುತ್ತೇನೆ ನೋಡು ಎಂದು ಹೇಳಬೇಕು'' ಅನ್ನಿಸುತಿತ್ತು ಅವನ ಹೊಟ್ಟೆಯೊಳಗೆ. ಆದರೆ ಅದಕ್ಕೆ ಎದೆ ಬರಬೇಕಲ್ಲ? ಮತ್ತು ಕುಂಞಣ್ಣನನ್ನು ದೂರುವದೇಕೆ-ದೂರಬೇಕು ಎದೆಯನ್ನು!

—"ಈ ಕಾಂಗ್ರೆಸಿನವ ಸಂತಾನಕ್ಕೆ ಬಿಸಿ ನೀರೆರೆಯಲಿಕ್ಕೆ ತೆಗೆದರಲ್ಲಾ ನನ್ನ ಸರ್ವಸ್ವ! ಗೊಂಬೆಯು ಹದಿನೆಂಟು ಸಾವಿರ ರೂಪಾಯಿಗಳನ್ನು ಠಣ್ ಠಣ್ ಬಡೆದಿದ್ದನಲ್ಲಾ-ತಿರುಗಿ ಬಂದುದೆಷ್ಟು, ಮೂರೇ ಸಾವಿರ! ಪರಮೇಶ್ವರಾ! ಅಯ್ಯೊ! ಅಯ್ಯೊ! ಇನ್ನು ಈ ಪಂಡಿತ ಏನಾದರೂ ಕಾಸು ಕೇಳಿ ಸಾಯುತ್ತಾನೋ ಏನೊ! ಹರ ಹರಾ! ಎರಡು ಮಾತ್ರ ಕೊಟ್ಟು ಹೋಗುವದು ಬಿಟ್ಟು ಏನೋನೋ ಮಾಡುತ್ತಿದ್ದಾನಲ್ಲಾ! ಅಯ್ಯಬ್ಬ ದೇವಾ! ಅಯ್ಯೊ! ನಾನೇಕೆ ಸಾಯುವದಿಲ್ಲ!''

ಹದಿನೈದು ಮಿನಿಟುಗಳ ವರೆಗೂ ಸಿಪ್ಪದ್ಧ ಪಂಡಿತರು ತಲೆಯಿಟ್ಟು ನೋಡಿದರು-ಕೇಳಿದರು. ಅವರ ತಲೆಯಲ್ಲಿ ಸುತ್ತುತಿತ್ತು-? "ಇದಕ್ಕಿಂತ ಮನೆಯಲ್ಲಿಯೇ ಲೋಡಿಗೊರಗಿ ಬಿದ್ದುಕೊಂಡಿರ ಬಹುದಿತ್ತು!'' ಮತ್ತೆ ಅವರು ಮಾಡಿದುದೇನು? ಅಲ್ಲಿ ಆ ಲೋಡಿಗೊರಗಿದುದು; ಇಲ್ಲಿ ಈ ಲೋಡಿಗೊರಗಿದುದು!

ವೀರಭದ್ರಪ್ಪನವರಿಗೆ ಸ್ವಲ್ಪ ಗುಣವುಂಟಂತೆ. ಗಾಬರಿಯಾಗಬೇಡಿ.

---

#  ಮಹಾ ಕಥೆಗಳು 

## ಅಜ್ಜಿಯ ಅವಸ್ಥೆ

ನಿನ್ನೆ ನಾನೊಂದು ಹೊಸ ಬೆಟ್ರಿ ಲೈಟನ್ನು ಕೊಂಡುಕೊಂಡಿದ್ದೆ. ಅದನ್ನು ನಾನು ಕೊಂಡುಕೊಂಡದ್ದು ಇದೇ ಮೊದಲು.

ರಾತ್ರಿ ಹಟ್ಟಿಯಲ್ಲಿ ಏನೋ ಸ್ವರವಾಯಿತು. ಅಜ್ಜಿ ಎಚ್ಚತ್ತು ದೀಪ ಹೊತ್ತಿಸಬೇಕೆಂತ ಬೆಂಕಿ ಕಡ್ಡಿಗೆ ಹುಡುಕಾಡಿದರು; ಸಿಕ್ಕಲಿಲ್ಲ. ನನ್ನನ್ನು ಎಬ್ಬಿಸಿ, "ರಾಮೂ, ನೀನು ಬೆಂಕಿ ಪೆಟ್ಟಿಗೆ ತೆಗೆದಿದ್ದೀಯಾ?" ಎಂದು ಕೇಳಿದರು.

"ಇಲ್ಲಜ್ಜಿ, ಏನಾಯಿತು?"

"ಹಟ್ಟಿಯಲ್ಲಿ ಏನೋ ಸ್ವರವಾಗುತ್ತದೆ."

ನಾನು ಬೆಟ್ರಿ ಸ್ವಿಚ್ ಹಾಕಿ ಬೆಳಕುಮಾಡಿ ಅವರ ಹತ್ತಿರ ಕೊಟ್ಟೆ: "ನೋಡಿ ಬನ್ನಿ."

ಅವರು ನೋಡಿ ಹಿಂದೆ ಬಂದರು.

"ನಂದಿಸಿ ಇಲ್ಲಿ ಇಟ್ಟು ಬಿಡಿ."

ನಂದಿಸಲಿಕ್ಕೆ ಅಜ್ಜಿಗೆ ಗೊತ್ತುಂಟೆ? ಅವರು ಬೆಟ್ರಿಯ ತಲೆಯನ್ನು ಬಾಯಿಹತ್ತಿರ ಹಿಡಿದು ಫೊ, ಫೊ, ಎಂತ ಊದಿದರು. ನಂದಲಿಲ್ಲ. ಕಡೆಗೆ ಒಂದು ತಂಬಿಗೆ ನೀರು ತೆಗೆದು ಅದರ ಮೇಲೆ ಹೊಯ್ದರು.

*⁎*

## ಗಾಬರಿ

ನಾಣಾ ಹೊಸತಾಗಿ ಸೈಕಲ್ ಸವಾರಿ ಕಲಿತಿದ್ದ. ಆದರೂ ವೇಗವಾಗಿ ಸೈಕಲ್ ಬಿಡುತ್ತಿರುವಾಗ ನಿಲ್ಲಿಸಿ ಕೆಳಗಿಳಿಯುವಷ್ಟು "ಎಕ್ಸ್‌ಪರ್ಟ್" ಆಗಿರಲಿಲ್ಲ.

ಆ ಹೊತ್ತು ಉಮೇದಿನಿಂದ ರಂಗರಾಯರ ಸೈಕಲ್ ಸ್ಟೋರ್ಸಿನಿಂದ ಒಂದು ಸೈಕಲ್ ತೆಗೆದುಕೊಂಡು ನೆಟ್ಟಗೆ ತೆರಬೀದಿಗೆ ಬರಬೇಕೆಂತ ಪಡುಪೇಟೆಯ ಇಳಿಜಾರಿನಲ್ಲಿ ಸವಾರಿ ಮಾಡಹತ್ತಿದ. ಸ್ವಲ್ಪ ದೂರ ಬರುತ್ತಿರುವಾಗ ಒಂದು ಅಂಗಡಿಯಿಂದ ಒಬ್ಬ ಹುಡುಗ ಕೂಗಿದ —

"ನೋಡ್ಯಯ್ಯ. ಸೈಕಲಿನ ಹಿಂದಿನ ಚಕ್ರ ತಿರುಗುತ್ತೆ."

ನಾಣಾ ಗಾಬರಿಯಿಂದ ಕೆಳಗಿಳಿಯಲಿಕ್ಕೆ ಪ್ರಯತ್ನಮಾಡಿ ಹಿಂದಿನ ಚಕ್ರದ ಬ್ರೇಕ್ ಹಿಡಿಯುವ ಬದಲಿಗೆ ಮುಂದಿನ ಚಕ್ರದ ಬ್ರೇಕ್ ಎಳೆದು ಮುಗ್ಗರಿಸಿ ಬಿದ್ದ. ಸೈಕಲ್ ಚರಂಡಿಯಲ್ಲಿ.

*⁎*

## ಬುದ್ಧಿವಂತ

ಶೀನೂಗೂ ಮೊಯ್ದಿನ್ ಸಾಹೇಬರಿಗೂ ಬಹಳ ಸ್ನೇಹಾಚಾರವಿತ್ತು. ಶೀನು ಯಾವಾಗಲೂ ಮೊಯ್ದಿನ್ ಸಾಹೇಬರ ಬೀಡಾ ಅಂಗಡಿಯಲ್ಲಿ ಬೀಡಾ ತಿಂದು ನಗುತ್ತಾ ವಿನೋದ ಮಾಡುತ್ತಾ ನಿಂತಿರುವುದಿತ್ತು. ಮೊಯ್ದಿನ್ ಸಾಹೇಬರೂ ಶೀನೂನಿಂದ ಅನೇಕ ಉಪಕಾರಗಳನ್ನು ಪಡೆದಿದ್ದರು.

ಒಂದು ದಿನ ಶೀನು, ಸಾಯ್ಬರ ಅಂಗಡಿಯ ಬಾಗಿಲಲ್ಲಿ ಬೀಡಾ ತಿನ್ನುತ್ತಾ ನಿಂತಿರುವಾಗ ಒಬ್ಬಳು ಚೆಲುವೆ ಹೆಂಗಸು ಆ ಮಾರ್ಗವಾಗಿ ಹೋಗುತ್ತಿದ್ದಳು. ಸಾಯ್ಬರು ತಮ್ಮ ಜನ್ಮ ಸಹಜವಾದ ಹುಡುಗಾಟಿಕೆಯೊಡನೆ ಗೇಲಿಮಾಡಿದರು.

"ನೋಡಿಯಯ್ಯ, ಶ್ರೀನಿವಾಸರಾಯರೇ ಎಂಥಾ ವೈಯಾರದ್ಯ ಹುಡುಗಿ—"

"ಹೌದು ಸಾಯ್ಬರೆ, ಭಾರೀ ಝೋಕೀ ಹುಡುಗಿ" ಎಂದು ಶೀನು ನಗುತ್ತಾ ಸೈಗುಟ್ಟಿದ.

ಶೀನೂ ಹೋದ ಕೂಡ್ಲೆ ಅಲ್ಲಿಯೇ ನಿಂತಿದ್ದ ಮತ್ತೊಬ್ಬ ಸಾಯ್ಬರು—

"ಕ್ಯೋಂ, ಬೇ, ಮೊಯ್ದಿನ್. ವೋ ಲಡ್‌ಕೀ ಹೈ ಉನ್‌ಕೀ ಔರತ್ (ಅರೇ ಮೊಯ್ದಿನ್, ಆ ಹುಡುಗಿ ಅವರ ಹೆಂಡತಿ.) ಎಂದು 'ಸೂತ ಉವಾಚ' ಮಾಡಿದರು.

"ಹಾಗಾದರೆ ಅವರು ಯಾಕೆ ಮಾತಾಡ್ಲಿಲ್ಲ?"

"ಹಾಗೆ ಮಾತಾಡಿ ಮುಖಕ್ಕೆ ಮಸಿ ಮಾಡ್ಕೊಳ್ಳೋಕೆ ಅವರು ನಿನ್ಹಾಗೆ ಬೇವ್‌ಕೂಫ್ ಅಲ್ಲ."

*⁎*

ಮರುದಿನ ಶ್ರೀನಿವಾಸ ಮೊಯ್ದಿನ್ ಸಾಯ್ಬರಲ್ಲಿ ಬೀಡ ತಿನ್ನಲಿಕ್ಕೆ ಹೋದಾಗ ಸಾಯ್ಬರ ಮುಖ ನೋಡಬೇಕಿತ್ತು!

---

# ನಿಮಗೆ ಬೇಸರವಾದಾಗ ನನಗೆ ಬರೆಯಿರಿ

**ಶ್ರೀ. ಕೆ. ಜಿ. ಯನ್. ಕೆ. ಉಡುಪಿ.**

"ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯು ಲೆಖ್ಖ ಪತ್ರಗಳನ್ನು ಪ್ರಕಟಿಸಬೇಕಾಗಿ ಎರಡು ಮೂರು ತಿಂಗಳ ಮೊದಲು ಕಾಂಗ್ರೆಸ್ ಸದಸ್ಯರೊಬ್ಬರು ಪತ್ರಿಕೆಗಳಲ್ಲಿ ವಿನಂತಿ ಮಾಡಿಕೊಂಡಿದ್ದರು. ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯವರು ಇಷ್ಟರ ತನಕ ತಮ್ಮ ಹಳೇ ರಿಕಾರ್ಡನ್ನು ಪ್ರಕಟಿಸದೆ ಇರುವ ಕಾರಣವಾದರೂ ಏನಿರಬಹುದು?'

ಲೆಖ್ಖ ಪತ್ರಗಳನ್ನು ಪ್ರಕಟಿಸದಿರಲು ಕಾರಣಗಳು ಅನೇಕವಿರಬಹುದು. ದಕ್ಷಿಣ ಕನ್ನಡದ ಹಲವು ಕಾಂಗ್ರೆಸ್ ಸಂಸ್ಥೆಗಳು ತಮ್ಮ ಲೆಖ್ಖ ಪತ್ರಗಳನ್ನು ಪ್ರಕಟಿಸದಿರುವುದರಿಂದ, ಉಡುಪಿ ತಾ. ಕಾಂ. ಕಮಿಟಿಯು ಕೂಡಾ ಅವುಗಳ ಮಾದರಿಯನ್ನನುಸರಿಸುವಂತಿದೆ. ದಕ್ಷಿಣ ಕನ್ನಡ ಜಿಲ್ಲಾ ಪಾರ್ಲಿಮೆಂಟರಿ ಬೋರ್ಡು ಇನ್ನೂ ತನ್ನ ಲೆಖ್ಖ ಪತ್ರಗಳನ್ನು ಪ್ರಕಟಿಸುವ ಗೋಜಿಗೆ ಹೋಗಲಿಲ್ಲ. ಅದರ ಅಧಿಕಾರಿಗಳು ನಿರ್ಲಜ್ಜೆಯಿಂದ ಹೊಣೆಗಾರಿಕೆಯನ್ನು ಬೇರೆಯವರ ಮೇಲೆ ಹೊರಿಸಲು ಯತ್ನಿಸುತ್ತಿದ್ದಾರೆ. ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯವರು ತಮ್ಮ ಲೆಖ್ಖ ಪತ್ರಗಳನ್ನು ಪ್ರಕಟಿಸಲಿಲ್ಲವೆಂದು ಹಲವಾರು ತಿಂಗಳುಗಳಿಂದ ದೂರುಗಳು ಪತ್ರಿಕೆಗಳಲ್ಲಿ ಪ್ರಕಟವಾದರೂ ಅದರ ಅಧಿಕಾರಿಗಳು ಬೇಜವಾಬ್ದಾರರಂತೆ ಸುಮ್ಮನಿದ್ದಾರೆ. ಸಾರ್ವಜನಿಕ ಹಣವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಕಾಂಗ್ರೆಸ್ ಅಧಿಕಾರಿಗಳು ತಿಳಿಯುವುದು ಅತ್ಯಾವಶ್ಯವಾಗಿರುವುದಲ್ಲದೆ ಕಾಂಗ್ರೆಸ್ ಚಟುವಟಿಕೆಯ ಈ ಭಾಗವು ಶಿಸ್ತಿನ ಪರಿಪಾಲನೆಯ ಮೊದಲನೆ ಪಾಠದಂತಿದೆ. ಇದರ ವ್ಯವಸ್ಥೆಯನ್ನು ಸರಿಯಾಗಿ ಮಾಡಲಾಗದ ಈಗಿನ ಜಿಲ್ಲಾ ಕಾಂಗ್ರೆಸ್ ಅಧಿಕಾರಿಗಳು ಇತರ ಕಾರ್ಯಗಳನ್ನೂ ಯೋಗ್ಯವಾಗಿ ಮಾಡುವುದಾದರೂ ಹೇಗೆಂಬ ಸಂಶಯವುತ್ಪನ್ನವಾಗುತ್ತದೆ. ಲೆಖ್ಖವನ್ನು ಪ್ರಕಟಿಸದಿರುವ ಈ 'ವ್ಯಾಧಿ'ಯು ಜಿಲ್ಲೆಯ ಸಮತಾವಾದಿ ಪಕ್ಷಕ್ಕೂ ಉಂಟಾಗಿದೆಯೆಂದು ಅವರ ಲೆಖ್ಖ ಪತ್ರಗಳು ಪ್ರಕಟವಾಗದಿರುವುದರಿಂದ ವ್ಯಕ್ತವಾಗುತ್ತದೆ. ಕಾಂಗ್ರೆಸ್ ಕಮಿಟಿಗಳು ಕ್ಲಪ್ತ ಸಮಯಕ್ಕೆ ಲೆಖ್ಖ ಪತ್ರಗಳನ್ನು ಪ್ರಕಟಿಸುವ ಏರ್ಪಾಡನ್ನು ಕರ್ನಾಟಕ ಪ್ರಾಂತಿಕ ಕಮಿಟಿಯವರು ಮಾಡುವುದು ಅತ್ಯವಶ್ಯವೆಂದು ಒತ್ತಿ ಹೇಳಬೇಕಾಗಿದೆ.

ಪ್ರಾಯಶಃ ನೀವು ಕೂಡಾ ಒಬ್ಬ ಕಾಂಗ್ರೆಸ್ ಪ್ರಾಥಮಿಕ ಸದಸ್ಯರೆಂದು ತೋರುತ್ತದೆ. ಹಾಗಿದ್ದರೆ ಉಡುಪಿ ತಾ. ಕಾಂ ಕಮಿಟಿಯವರು ಲೆಖ್ಖ ಪತ್ರಗಳನ್ನು ಪ್ರಕಟಿಸಲು ಬೇಕಾದ ಯತ್ನವನ್ನು ಮಾಡದೆ ಸುಮ್ಮನಿರುವುದರಿಂದ ನಿಮಗೂ ಆ ಗಾಳಿಯು ತಾಗಿದೆಯೆಂದು ಸ್ಪಷ್ಟವಾಗುವುದಿಲ್ಲವೆ?

ಅದಿರಲಿ. ನೀವು ನಿಮ್ಮ ಪೂರ್ಣ ಹೆಸರನ್ನು ಪ್ರಕಟಿಸಲು ಬೆದರಿರುವುದನ್ನು ನೋಡುವಾಗ ಮೇಲಿನ ಪ್ರಶ್ನೆಯನ್ನು ಕೇಳಲು ನೀವು ತುಂಬಾ ಹೆದರಿರುವಿರೆಂದು ಕಾಣುತ್ತದೆ. ನಿಮ್ಮಂಥ ಪ್ರಾಥಮಿಕ ಸದಸ್ಯರಿರುವುದರಿಂದಲೇ ಉಡುಪಿ ತಾ. ಕಾಂ. ಕಮಿಟಿಯವರು ಲೆಖ್ಖ ಪತ್ರಗಳನ್ನು ಪ್ರಕಟಿಸದಿರಲು ಮೂಲ ಕಾರಣವೆಂದು ನಾನು ಹೇಳಿದರೆ ಅತಿಶಯೋಕ್ತಿಯಾಗಬಹುದೆ?

"ಕಳೆದ ಮೇ ತಿಂಗಳಲ್ಲಿ ಕಟಪಾಡಿಯಲ್ಲಿ ಜರಗಿದ ಪ್ರಚಂಡ ರಾಜಕೀಯ ಪರಿಷತ್ತಿನ ಲೆಖ್ಖ ಪತ್ರಗಳು ಮೇಲಿನಂತೆಯೇ ಇನ್ನೂ ಪ್ರಕಟವಾಗಿಲ್ಲ. ಕಾರಣವೇನಿರಬಹುದು? ತಿಳಿಸುವಿರಾ? (ಗೊತ್ತಿದ್ದರೆ)"

"ಪ್ರಚಂಡ" ಪರಿಷತ್ತಾಗಿರುವುದರಿಂದ ಅದರ ಲೆಖ್ಖಪತ್ರಗಳೂ "ಪ್ರಚಂಡಾವಸ್ಥೆ"ಯಲ್ಲಿರಬಹುದು. ಇಲ್ಲದಿದ್ದರೆ ಇಷ್ಟರೊಳಗೆ ಅವುಗಳು ಪತ್ರಿಕೆಗಳ ಪುಟಗಳೊಳಗೆ ನುಗ್ಗುತ್ತಿದ್ದವು. ಪರಿಷತ್ತನ್ನು ನಡೆಸಿದವರು ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯವರಾದುದರಿಂದ ಅವರು ಅನುಸರಿಸುತ್ತಿರುವ ಕ್ರಮವನ್ನೇ ಪರಿಷತ್ತಿನಲ್ಲಿಯೂ ಜಾರಿಗೆ ತಂದಿರಬೇಕೆಂಬ ಭಾವನೆಯು ನಿಮಗೇಕೆ ಹೊಳೆಯುವುದಿಲ್ಲ? ಪರಿಷತ್ತನ್ನು ನಡೆಸಿದವರು ತುಂಬಾ ದಣಿದಿರುವುದರಿಂದ ಅವರಿಗೆ ಒಂದು ವರುಷದ ವಿಶ್ರಾಂತಿಯನ್ನಾದರೂ ಕೊಡುವ ಕರುಣೆಯು ನಿಮಗಿಲ್ಲವೆ?

ಶ್ರೀ. ಯು. ನಾಗೇಶ ಶೆಣೈ,
ಉಡುಪಿ.

---

"ತಮ್ಮ ಅಂತರಂಗವು ಪ್ರಕಟವಾದಂದಿನಿಂದ ಈ ವರೆಗೆ ನನಗೆ ತಲಪಿದ

(೧೭ನೇ ಪುಟಕ್ಕೆ ಮುಂದರಿದಿದೆ.)



# ಷೋಕೀ ಜಗತ್ತಿನ ಝೋಕೀ ಪುರಾಣ



**ಸಮರ್ಥನೆಯೇ ಸಮರ್ಥನೆ!**

ಶೇಕಡಾ ೬೫ರಿಂದ ೩೦ ರಷ್ಟು ಮುಸಲ್ಮಾನರು ಸೈನ್ಯದಲ್ಲಿರುವುದರಿಂದ, ಪಂಜಾಬಿನಲ್ಲಿ ಕಾಂಗ್ರೆಸಿನವರು ಅಪಪ್ರಚಾರ ಮಾಡಿ ಅಲ್ಲಿಯ ಸಿಕಂದರ್ ಮಂತ್ರಿಮಂಡಲವನ್ನು ಉರುಳಿಸಲೆತ್ನಿಸುತ್ತಿರುವುದರಿಂದ ಮಿ| ಜಿನ್ನರು ಕೇಂದ್ರ ವಿ. ಸಭೆಯಲ್ಲಿ ಸೈನ್ಯ ಮಸೂದೆಯನ್ನು ಸಮರ್ಥಿಸಿದರಂತೆ.

ನಂಬುತ್ತೇವೆ! ಪೂರ್ಣ ನಂಬುತ್ತೇವೆ!! ಕಾಂಗ್ರೆಸಿನವರು ಮುಸಲ್ಮಾನರನ್ನು ಕೆಡಿಸುತ್ತಾರೆ. ಬ್ರಿಟಿಷ್ ಸರಕಾರದವರು ರಕ್ಷಿಸುತ್ತಾರೆ. ಇದು ಭಾರತದ ಉಪಕಾರ (?) ದೃಷ್ಟಿಯಿಂದ ಮಾಡಿದ್ದಲ್ಲದೆ ಮತ್ತೇನೂ ಅಲ್ಲ!

ooo

ಮುಂದುವರಿಸುತ್ತಾ- ರಾಜಕೀಯವೆಂದರೆ ಚತುರಂಗದಾಟ. ಅದರಲ್ಲಿ ವ್ಯೂಹದೊಳಗೆ ವ್ಯೂಹಗಳಿವೆ. ಎಲ್ಲರಿಗೂ ಅದನ್ನು ತಿಳಿಯಪಡಿಸುವುದು ಕಷ್ಟವೆಂದಿದ್ದಾರೆ ಮಿ| ಜಿನ್ನರು.

ಹೌದೌದು! ರಾಜಕೀಯವೆಂದರೆ ಕೇವಲ ಚತುರಂಗದಾಟ. ಅದರಲ್ಲಿ ಹಲವು ವ್ಯೂಹಗಳಿವೆ. ಬ್ರಿಟಿಷ್ ವ್ಯೂಹ, ಸ್ವಾರ್ಥವ್ಯೂಹ, ಶೌಕತಾಲಿ ವ್ಯೂಹ ಇತ್ಯಾದಿ. ಈ ವ್ಯೂಹಗಳನ್ನು ಎಲ್ಲರಿಗೂ ತಿಳಿಯಲು ಸಾಧ್ಯವಿಲ್ಲ. ಮುಸ್ಲಿಮ್ ಲೀಗ್‌ಕಿ ಜೈ. ಜಿನ್ನಾ ಸಾಹೇಬ್‌ಕೀ ಜೈ!!

ooo

ಮುಸಲ್ಮಾನರಿಗೆ ಸಾಕಷ್ಟು ವಿದ್ಯಾಭ್ಯಾಸ ದೊರಕಲಿಲ್ಲ; ಆದುದರಿಂದ ರಾಜಕೀಯವು ಅವರಿಗರಿಯಲಿಕ್ಕಿಲ್ಲವೆನ್ನುತ್ತಾರವರು.

ಪೂರ್ಣ ಸತ್ಯ! ಮುಸಲ್ಮಾನರಿಗೆ ಸಾಕಷ್ಟು ವಿದ್ಯಾಭ್ಯಾಸವಿಲ್ಲದಿರುವುದರಿಂದಲೇ ಮಿ| ಜಿನ್ನರು ಹೀಗೆ ಹೇಳುತ್ತಿರುವುದು. "ಕಾಂಗ್ರೆಸಿನವರ ಹಂಚಿಕೆ"ಗೆ ಮುಸಲ್ಮಾನರು ಒಳಗಾದರೆ ಮಿ| ಜಿನ್ನರು ಹೊರಗಾಗಬೇಕಾದೀತು. ಆದುದರಿಂದ "ಮಿ| ಜಿನ್ನರ ಹಂಚಿಕೆ"ಗೆ ಒಳಗಾಗಬೇಕು. ಜೈ! ಜಿನ್ನರ ಮುಸ್ಲಿಮ್ ಲೀಗ್‌ಕಿ ಜೈ!! ವ್ಯೂಹಗಳಿಗೆ ಜೈ! ಚತುರಂಗದಾಟಕ್ಕೆ ಜೈ ಜೈ!!!

ooo

**ಶ್ರೀ. ಜಿನರಾಜ ಹೆಗ್ಡೆಯರ ಪ್ರಶ್ನೆ.**

ದಕ್ಷಿಣ ಕನ್ನಡದಿಂದ ಇತ್ತೀಚೆಗೆ ಆರಿಸಲ್ಪಟ್ಟ ಶ್ರೀ. ಕೆ. ಬಿ. ಜಿನರಾಜಹೆಗ್ಡೆಯರು ಕೇಂದ್ರ ವಿಧಾಯಕ ಸಭೆಯಲ್ಲಿ ರೈಲ್ವೆ ಬೋರ್ಡಿನವರು-ಹಾಸನ್, ಮಂಗಳೂರು, ಮಂಗಳೂರು-ಮಲ್ಪೆ, ಸಾಗರ್-ಭಟ್ಕಲ್, ಕಡೂರ್ ಮಂಗಳೂರು-ಬೆಳಗಾಂ- ಹುಬ್ಬಿ, ಶೆಡ್ಬಾಲ್ ಬಿಜಾಪುರ್, ಗದಗ, ರಾಯಚೂರ ಇತ್ಯಾದಿ ಲೈನುಗಳನ್ನು ತೆರೆಯಬೇಕೆಂದು ಅರ್ಜಿ ಬಂದಿದೆಯೇ ಎಂದು ಕೇಳಿದರಂತೆ.

ಅರ್ಜಿಗಳು ಬಂದಿವೆ ಮೇಲಿನ ಲೈನುಗಳನ್ನು ತೆರೆಯಲು ಮಾಡಿದ ಸರ್ವೆಗೆ ಎಷ್ಟು ಖರ್ಚಾಗಿದೆಯೆಂದು ಹೇಳಲಾಗುವುದಿಲ್ಲ, ಅವುಗಳಲ್ಲಿ ಹೆಚ್ಚಿನವುಗಳು ಲಾಭದಾಯಕವಲ್ಲ, ಅವುಗಳಲ್ಲಿ ಯಾವುದನ್ನೂ ತೆರೆಯುವ ಯೋಜನೆಯು ಸರಕಾರಕ್ಕಿಲ್ಲವೆಂದು ಮಾನನೀಯ ರೈಲ್ವೇ ಮೆಂಬರರು ಉತ್ತರವಿತ್ತರಂತೆ.

ಮೊದಲೇ ಗೊತ್ತಿದ್ದ ಉತ್ತರವಿದು! ಪಾಪ. ಸೈನ್ಯಕ್ಕೆ ಖರ್ಚು ಮಾಡಿ ಭಾರತವನ್ನು "ರಕ್ಷಿಸುವುದೆ"? ಅಥವಾ ದಯಾಳು ಸರಕಾರವು ಹೊಸ ರೈಲ್ವೇ ಲೈನುಗಳನ್ನು ತೆರೆಯುವುದೆ? ಹೊಸ ಲೈನುಗಳ ಯೋಜನೆಯಿಲ್ಲದಿದ್ದರೂ, ಸೈನ್ಯಕ್ಕೆ ಇನ್ನಷ್ಟು ಖರ್ಚು ಮಾಡುವ ಯೋಜನೆಯು ಸರಕಾರಕ್ಕಿರಬಹುದು!

ooo

**ಕೌನ್ಸಿಲ್ ಅಫ್ ಸ್ಟೇಟಿನಲ್ಲಿ—**

ಬಹಳ ಸ್ವಾರಸ್ಯದ ಚರ್ಚೆಯೊಂದು ನಡೆಯಿತು. ಸೈನ್ಯ "ರಿಕ್ರೂಟ್‌ಮೆಂಟ್" ಮಸೂದೆಯನ್ನು ವಿರೋಧಿಸುತ್ತಾ ಶ್ರೀ. [illegible] ರಾಮದಾಸಪಂತುಲುರವರು ಉ[illegible]

ಡೊಮಿನಿಯನ್ (ವಸಾಹತು)ಗಳು ಇಂಗ್ಲೆಂಡನ್ನು ವಿರೋಧಿಸುವುದು ನ್ಯಾಯವಾದರೆ ಭಾರತೀಯರ ವಿರೋಧವು ಅದೇಕೆ ನ್ಯಾಯಬಾಹಿರವಾಗಿರಬೇಕು? ಎಂದು ಕೇಳಿದಾಗ ಅಧ್ಯಕ್ಷ ಸರ್ ಮಾನೆಕ್ಜಿ ದಾದಾಬಾಯಿ: "ನಿಮಗೆ ಡೊಮಿಯನ್ ಸ್ಟೇಟ್ಸ್ ಸಿಗದಿರುವುದರಿಂದ" ಎಂದರು.

ಕೂಡಲೆ ಪಂತುಲುಗಾರರಂದರು: "ನಮಗೆ ಯಾವ ಹಕ್ಕೂ ಇಲ್ಲದಿದ್ದರೆ ನಮ್ಮೊ ಸಭೆಯ ಮುಂದೆ ಅದನ್ನು ತಂದಿರುವುದೇಕೆ"

ಇಷ್ಟೂ ಗೊತ್ತಿಲ್ಲವೆ? ಕೇವಲ ತಮಾಷೆಗಾಗಿ!

ooo

## ತಲೆ ಕೆಳಗೆ!

ಸಂಯುಕ್ತ ಪ್ರಾಂತ್ಯದ ಮಾನ್ಯ ಮಂತ್ರಿ ವಿಜಯಲಕ್ಷ್ಮಿ ಪಂಡಿತರವರು 'ತಲೆ ಕೆಳಗೆ ಕಾಲು ಮೇಲೆ ಮಾಡುವ ಒಂದು ವ್ಯಾಯಾಮ ಮಾಡುವುದಲ್ಲದೆ ಅವರ ಸಂಸ್ಥಾನವು ಭಾರತದ ಇತರ ಪ್ರಾಂತ್ಯಗಳಿಗಿಂತ ಬಹಳ ಹಿಂದಿರುವಂತಹದು' ಎಂದು ಇಂಗ್ಲೆಂಡಿನ ಪತ್ರಿಕೆಗಳು ಸಾರಿದುವು. ಶ್ರೀಮತಿ ಪಂಡಿತರು ಅದಕ್ಕೆ ಸರಿಯಾದ ಉತ್ತರವಿತ್ತರೆನ್ನಿ. ಆದರೂ ಬ್ರಿಟಿಷ್ ಪತ್ರಿಕೋದ್ಯಮಿಗಳಿಗೆ ಭಾರತದ ಕುರಿತು ತುಂಬಾ ತಿಳಿದಿದೆಯೆಂಬುದರಲ್ಲಿ ಎಳ್ಳನಿತು ಸಂಶಯವಿದೆಯೆ?

ooo

## 'ದೂರದ ಕನಸು'

ಕಾಂಗ್ರೆಸ್ ಜನರು ನಿಸ್ವಾರ್ಥಿಗಳಾಗಿರದಿದ್ದರೆ ಸ್ವರಾಜ್ಯವು ದೂರದೊಂದು ಕನಸಾಗುವುದೆಂದು ಮಹಾತ್ಮಾಜಿಯವರಂದಿದ್ದಾರೆ.

ಅದಕ್ಕಾಗಿಯೇ ಇತ್ತೀಚೆಗೆ ಬಂಗಾಳ, ಮಧ್ಯಪ್ರಾಂತ್ಯ ಮೊದಲಾದೆಡೆಗಳಲ್ಲಿ ಮಹತ್ವದ 'ನಿಸ್ವಾರ್ಥ'ವು ತಲೆಯೆತ್ತಿ ಕಾಣಿಸುತ್ತಿರುವುದಾಗಿರಬಹುದು.

ooo

## "ಯುದ್ಧ ಮನೋವೃತ್ತಿ"

ಭಾರತೀಯರು ಯುದ್ಧ ಮನೋವೃತ್ತಿಯವರಾಗಿರಬೇಕೆಂದು ರಾಷ್ಟ್ರಪತಿ ಸುಭಾಷ್ ಬೋಸರು ವಾರ್ಧದಲ್ಲಿ ಹೇಳಿದರು.

ನಮ್ಮಲ್ಲಿ ಇತ್ತೀಚೆಗೆ 'ಅಂತರ್-ಯುದ್ಧ ಮನೋವೃತ್ತಿ'ಯು ಧಾರಾಳ ಹೆಚ್ಚುತ್ತಿದೆಯೆಂದು ಬಂಗಾಳವನ್ನು ನೋಡಿದರೆ ಸ್ಪಷ್ಟವಾಗುತ್ತದೆ.

---

(೧೫ನೇ ಪುಟದಿಂದ)

ಲ ಸಂಚಿಕೆಗಳಲ್ಲೂ ನನ್ನ ರಾಶಿಯಾದ ಕನ್ಯಾ ರಾಶಿಗೆ ಒಳ್ಳೆಯ ಫಲವಿಲ್ಲವು. ನಿಮ್ಮ ಅಂತರಂಗದಲ್ಲಿ ಇನ್ನೆಷ್ಟು ಸಮಯ ನನಗೆ ಹಾನಿ ಇದೆ ಎಂಬುದನ್ನು ದಯವಿಟ್ಟು ತಿಳಿಸುವಿರಾ?"

ಈ ಶೋಚನೀಯ ಅವಸ್ಥೆಗೆ ನೀವೇ ಹೊಣೆಗಾರರು. "ಕನ್ಯಾರಾಶಿ"ಯನ್ನು ಮೆಚ್ಚಿಸುವುದು ಸಾಮಾನ್ಯ ತರದ ಸುರೂಪಿಗಳಿಗೆ ಸಾಧ್ಯವಾಗುವ ಕೆಲಸವಲ್ಲ. ಎಷ್ಟರ ತನಕ ನೀವು ಈಗಿರುವಂತೆಯೇ ಇರುತ್ತೀರೋ ಅಷ್ಟರ ತನಕ ನಿಮ್ಮದೆಂದು ನೀವು ಕರೆಯುವ ರಾಶಿಯು ನಿಮಗೊಲಿಯುವಂತಿಲ್ಲ. ನಿಮ್ಮ ರೂಪವನ್ನು ನೀವು ಸುಧಾರಿಸಿಕೊಂಡೊಡನೆಯೇ ಅಂತರಂಗದಲ್ಲಿ ನಿಮ್ಮ "ಕನ್ಯಾರಾಶಿ" ಫಲವೂ ಉತ್ತಮವಾಗುವುದು. "ಕನ್ಯಾರಾಶಿ"ಯನ್ನೊಲಿಸಲು ನಿಮಗೆ ಸಾಧ್ಯವಿದೆಯೇ?

---



ತಿರುವಾಂಕೂರು ಸರಕಾರವು ಕೋವಿ ಹಿಡಿದು ಆಳುವ ಮನಸ್ಸು ಮಾಡಿದೆ. ಭಾರತದಲ್ಲಿ ನಮ್ಮ ತುಂಡು ರಾಜರ ಅತ್ಯಂತ ಪ್ರೀತಿಯ ವಿಷಯವೆಂದರೆ ಬೇಟೆ.

s s s s

ಕೆಲವು ಸಭೆಗಳ ಮೇಲೆ ಗುಂಡುಗಳು ಹಾರಿದವು; ಹಲವರ ಪ್ರಾಣಗಳನ್ನು ಹಾರಿಸಿದವು. ಸರಕಾರವನ್ನು ಹಾರಿಸಿಬಿಡುವ ದುರ್ಬುದ್ಧಿ ಈ ಹಾರಾಟಗಳಿಂದಲಾದರೂ ವಜಾ ಆಗಬಹುದಲ್ಲ?

s s s s

ಕೋವಿ ಹಾರಿದುದು ಪೋಲೀಸರ ಕೈಯ ಹಿಡಿತ ತಪ್ಪಿಯಲ್ಲ. ಜನರು ಕಲ್ಲೆಸೆದರು—ಪ್ರತಿಯಾಗಿ ಪೋಲೀಸರು ಗುಂಡೆಸೆದರು! ಪ್ರಜಾ-ರಾಜರಲ್ಲಿ ತಾರತಮ್ಯವಿದ್ದಂತೆಯೇ ಕಲ್ಲಿಗೂ ಗುರಿಡಿಗೂ ವ್ಯತ್ಯಾಸವಿರಬಹುದು!

s s s s

ಕಲ್ಲೆಸೆದುದು ನಿಜವೆಂಬುದಕ್ಕೆ ಒಬ್ಬಿಬ್ಬರು ಪೋಲೀಸರ ಮೈಯ ಗಾಯಗಳೇ ಸಾಕ್ಷಿ! ಸಭೆಯ ಸಾವಿರಾರು ಮಂದಿ ಸೇರಿ ಒಬ್ಬಿಬ್ಬರು ಪೋಲೀಸರ ಮೇಲೆ ಎತ್ತಿ ಹಾಕುವ ಆ ಕಲ್ಲುಗಳೆಷ್ಟು ದೊಡ್ಡವಿರಬೇಕು!

s s s s

ಅಷ್ಟು ದೊಡ್ಡ ಕಲ್ಲುಗಳಿಗೆ ಪ್ರತಿಯಾಗಿ ಪೋಲೀಸರು . ಸಣ್ಣ ಸಣ್ಣ ಗುಂಡುಗಳನ್ನು ಹಾರಿಸಿದ ಅಲ್ಪ ಪ್ರತೀಕಾರವನ್ನು ಇಷ್ಟು ದೊಡ್ಡದು ಮಾಡುವವರಿಗೆ ಅನ್ಯಥಾ ಕೆಲಸವಿಲ್ಲ!

s s s s

ಅಥವಾ ಸಾವಿರಾರು ಮಂದಿ ಸಭ್ಯರೊಡನೆ ಕಲ್ಲು ಹೊಡೆಯುವ ಒಬ್ಬಿಬ್ಬರು ಪುಂಡರಿದ್ದುದಾದರೂ ಸರಕಾರವು ತನ್ನ ಪ್ರಜೆಗಳಲ್ಲಿ ಭೇದ ಮಾಡಲಾರದು. ತಿರುವಾಂಕೂರೆಂದರೆ ಅಸ್ಪೃಶ್ಯತೆಯ ಭೇದವನ್ನು ಕೂಡಾ ನಿರ್ಮೂಲ ಮಾಡಿದ ಸಂಸ್ಥಾನವೆಂಬುದು ಇಷ್ಟು ಬೇಗನೆ ಮರೆತು ಹೋಯಿತೆ?

s s s s

ದುಷ್ಟರಾಗಲೀ ಶಿಷ್ಟರಾಗಲೀ ಎಲ್ಲರೂ ದೇವರ ಮಕ್ಕಳು. ದೇವರು ತನ್ನ ಮಕ್ಕಳ ಗುಣದೋಷಗಳನ್ನು ಗಣಿಸದೆ ಎಲ್ಲರಿಗೂ ಗಾಳಿ ಬೆಳಕನ್ನು ಕೊಡುತ್ತಾನೆ.

s s s s

'ರಾಜಾ ಪ್ರತ್ಯಕ್ಷ ದೇವತಾ' ಆದ್ದರಿಂದಲೇ ಕಲ್ಲು ಹೊಡೆದ ಕೆಲವು ಪುಂಡರನ್ನೂ ಸಾವಿರಾರು ಶಾಂತ ಸಭಿಕರನ್ನೂ ತಿರುವಾಂಕೂರು ಸರಕಾರವು ದೇವರು ನೋಡುವಂತೆ ಒಂದೇ ದೃಷ್ಟಿಯಿಂದ ನೋಡಿತು!

s s s s

'ಸಂಸ್ಥಾನಿಕ ಕಾಂಗ್ರೆಸ್ ರಾಜದ್ರೋಹಿಯಲ್ಲ; ತಿರುವಾಂಕೂರು ಸರಕಾರದ ವರ್ತನೆಯಲ್ಲಿ ನ್ಯಾಯವಿಲ್ಲ. ಸರ್ ಸಿ. ಪಿ. ಯವರಂತಹ ಸಮರ್ಥ ದಿವಾನರು ಹೀಗೆ ಮಾಡುವುದು ಯೋಗ್ಯವಲ್ಲ' ಎಂದು ಮಹಾತ್ಮಾಜಿಯವರನ್ನುತ್ತಾರೆ.

s s s s

ಆದರೆ ಸಿ. ಪಿ. ಯವರು ಇನ್ನು ಯೋಗ್ಯತೆ ಗಳಿಸುವುದೇನು ಉಳಿದಿವೆ? ಅವರೀಗ ಗಾಂಧಿಯವರ ಯೋಗ್ಯತೆಯುಳಿಸುವ ಕೆಲಸದಲ್ಲಿದ್ದಾರೆಂದು ಸ್ವತಃ ಮಹಾತ್ಮರಿಗೇ ಗೊತ್ತಿಲ್ಲ!

s s s s

'ಸ್ಟೇಟ್ ಕಾಂಗ್ರೆಸಿನವರು ಕಾಂಗ್ರೆಸಿನ ಹೆಸರಲ್ಲಿ ಸಿಕ್ಕಾಬಟ್ಟೆ ಅನ್ಯಾಯ ಮಾಡುತ್ತಿದ್ದಾರೆ. ನಿಮ್ಮ ಹೆಸರನ್ನೇ ಕೆಡಿಸುತ್ತಿದ್ದಾರೆ. ನಿಮಗೆ ಪರಿಸ್ಥಿತಿಯ ಅನುಭವವಿಲ್ಲ!' ಎಂದು ದಿವಾನರು ಉತ್ತರವಿತ್ತಿದ್ದಾರೆ.

s s s s

ಹೆಸರು ಹೊಂದದ ಕೆಲವರು ಸತ್ತುದನ್ನು ತಲೆಗೆ ಹಚ್ಚಿಕೊಂಡು ಕುಳಿತರಾಗದು; ಗಾಂಧಿಯವರ ಪ್ರಸಿದ್ಧ ಹೆಸರನ್ನುಳಿಸುವುದಕ್ಕಾಗಿಯೇ ದಿವಾನರು ಇಷ್ಟೆಲ್ಲಾ ಮಾಡುತ್ತಿದ್ದಾರೆಂಬುದರಿಂದ ಎಲ್ಲರೂ ಸಮಾಧಾನ ಹೊಂದಬೇಕು.

s s s s

'ದಿವಾನರ ಹೇಳಿಕೆಯು, ಜಾಲಿಯನ್ ವಾಲಾಬಾಗಿನ ಅತ್ಯಾಚಾರದ ಕುರಿತು ಆ ಕಾಲದಲ್ಲಿ ಇಂಡಿಯಾ ಸರಕಾರವು ಕೊಟ್ಟಿದ್ದ ಹೇಳಿಕೆಯನ್ನು ಹೋಲುತ್ತದೆ. ಅವರಲ್ಲಿ ನ್ಯಾಯವಿದ್ದರೆ ಶ್ರೀ. ಶ್ರೀನಿವಾಸ ಶಾಸ್ತ್ರಿಗಳಂಥವರನ್ನು ನೇಮಿಸಿ ವಿಚಾರಣೆ ನಡಿಸಲಿ' ಎಂದು ಗಾಂಧಿಯವರ ಮರುಮಾತು.

s s s s

ತಿರುವಾಂಕೂರಿನ ಅನುಭವ ಗಾಂಧಿಯವರಿಗಿಲ್ಲ; ಶಾಸ್ತ್ರಿಗಳಿಗುಂಟೆಂದು ಹೇಗೆ ನಂಬಲಿ?' ಸರ್ ಸಿ. ಪಿ. ಯವರು ಸ್ವತಃ ಅನುಭವ ಹೊಂದದಂತೆ ಮಾಡುವ ಅಧಿಕ ಪ್ರಸಂಗ ಈ ಅನನುಭವಿಗಳಿಗೆ ಯಾಕೆ?

—ದೂಮ

# ಬಿರುಗಾಳಿ

## ಅನುಕೂಲ ಸಿಂಧು ಪಕ್ಷದ ಸಭೆಯ ವರದಿ.

ಈ ಪಕ್ಷವನ್ನು ಅನುಕೂಲ ಸಿಂಧುಪಕ್ಷವೆಂದು ಕರೆಯಬೇಕಾಗಿ ಸರ್ವಾನುಮತದಿಂದ ನಿರ್ಣೈಸಲಾಯಿತು ಈ ಪಕ್ಷದ ಸಭೆಗಳು ಯಾವ ಸಾರ್ವಜನಿಕ ಹೊಟೆಲಿನಲ್ಲಿಯೂ ಜರಗಬಹುದು. (ಆದರೆ ಮದ್ಯಪಾನ ನಿಷೇಧ ಮಸೂದೆಯು ಜಾರಿಗೆ ಬಂದ ಜಿಲ್ಲೆಯಲ್ಲಾಗಿರಬಾರದು) ಈ ಪಕ್ಷಕ್ಕೆ ದಿವಾನ್ ಬಹದ್ದೂರ್ ಕುಂಭುನಾಥ ಶರ್ಮರನ್ನು ಕಾಯಂ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಇವರು ತಮಗೆ ಅನಾನುಕೂಲರಾದ ಸದಸ್ಯರನ್ನು ಪಕ್ಷದಿಂದ ಹೊರದಬ್ಬಬಹುದು ಮತ್ತು ಪಕ್ಷದ ಎಲ್ಲಾ ಖರ್ಚುಗಳನ್ನು ವಹಿಸುವ ಜವಾಬ್ದಾರಿಯನ್ನು ವಹಿಸಬೇಕು.

SS SS SS SS

ಬಹುಮತದ ಸರ್ವಾನುಮತಿಯಿಂದ ಈ ಕೆಳಗಿನ ಠರಾವು ಮಂಜೂರಾಯಿತು:—

ಈ ಪಕ್ಷವು ಕಾಂಗ್ರೆಸ್, ಮುಸ್ಲಿಮ್‌ಲೀಗ್, ಹಿಂದೂ ಮಹಾಸಭೆ ಮತ್ತು ಬ್ರಿಟಿಷ್ ಸರಕಾರ-ಇವುಗಳ ಪರಸ್ಪರ ಹೊಡೆದಾಟದಲ್ಲಿ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತದೆ; ಅಲ್ಲದೆ ಯಶಸ್ವಿಯಾಗುವ ಪಕ್ಷ ಅಥವಾ ಪಕ್ಷಗಳಿಗೆ ತನ್ನ ಹಾರ್ದಿಕ ಬೆಂಬಲವನ್ನು ಕೊಡುವುದಕ್ಕೆ ಸಿದ್ಧವಿದೆ.

ಈ ಮಧ್ಯೆ ರಾಯ್ ಬಹದ್ದೂರ್ ಸುಂದರ ಶಾಸ್ತ್ರಿಗಳು 'ಯಶಸ್ವಿ' ಎಂಬ ಶಬ್ದಕ್ಕೆ ತಮ್ಮ ವಿರೋಧವನ್ನು ಪ್ರಕಟಿಸಿದರು. ಚರ್ಚೆಯ ನಂತರ 'ಯಶಸ್ವಿ' ಯೆಂಬ ಶಬ್ದದ ಬದಲಿಗೆ 'ಗೆದ್ದ' ಎಂಬ ಶಬ್ದವನ್ನು ಸೇರಿಸಬೇಕೆಂದು ನಿರ್ಣಯವಾಯಿತು.

SS SS SS SS

ಬಿಂದೂರು ಸಂಸ್ಥಾನದ ಮಾನನೀಯ ಯುವರಾಜರಿಂದ ಸೂಚಿಸಲ್ಪಟ್ಟು ಖಾನ್ ಬಹದೂರ್ ಅಬ್ಬಾಸಾಲಿ ಸಾಹೇಬರಿಂದ ಸಮರ್ಥಿಸಲ್ಪಟ್ಟು ಈ ಕೆಳಗಿನಂತೆ ಠರಾಯಿಸಲ್ಪಟ್ಟಿತು:

ಹಿಂದುಸ್ಥಾನದಲ್ಲಿ ಜಾತೀಯ ಕಲಹಗಳು ಎದ್ದಾಗ ಈ ಪಕ್ಷದ ಯಾವ ಸದಸ್ಯರೂ ತಮ್ಮ ಅಂತಃಪುರವನ್ನು ಬಿಟ್ಟು ಹೊರಗೆ ಬರಬಾರದೆಂದೂ ಸಾಧ್ಯವಿದ್ದರೆ ಸಕುಟುಂಬವಾಗಿ ಯುರೋಪಿಗೆ ಪಯಣ ಬೆಳೆಸಬೇಕೆಂದೂ ಈ ಸಭೆಯು ಅಭಿಪ್ರಾಯ ಪಡುತ್ತದೆ. ಮತ್ತು ಸಂಸ್ಥಾನಗಳ ನರೇಂದ್ರರಿಗೂ, ಅವರ ಪ್ರಜೆಗಳಿಗೂ ಕಟಾಪಟಿಯಾದಾಗ ಪಕ್ಷವು ಅದರಲ್ಲಿ ಕೈಹಾಕಬಾರದೆಂದೇ ನಿರ್ಣೈಸುತ್ತದೆ. ಗೋಳೀಬಾರ್ ಇತ್ಯಾದಿ ಪ್ರಕರಣಗಳಾದ ನಂತರ ಸಂಸ್ಥಾನಿಕ ಸರಕಾರಗಳು ಏರ್ಪಡಿಸುವ ವಿಚಾರಣಾಸಮಿತಿಗಳಿಗೆ ಸರಕಾರದ ಪರವಾಗಿ ಈ ಪಕ್ಷದ ಸದಸ್ಯರು ಸಾಕ್ಷಿಗಳನ್ನು ತಯಾರಿಸಬಹುದು.

SS SS SS SS

ಪಕ್ಷದ ಅಧ್ಯಕ್ಷರು ಭಾರತದ ಕೋಟಿಗಟ್ಟಲೆ ಬಡವರ ಪರವಾಗಿ ಶ್ರೀ ಸುಭಾಷ್ ಬೋಸ್, ಮಿ. ಎಮ್. ಎ. ಜಿನ್ನಾ, ಬ್ಯಾ. ಸಾವರ್ಕರ್, ಲಾರ್ಡ್ ಲಿನ್ಲಿತ್ಗೋ, ಇವರೊಡನೆ ಗುಪ್ತ ಸಂಭಾಷಣೆಯನ್ನು ನಡೆಸಬೇಕೆಂದು ಈ ಸಭೆಯು ಸೂಚಿಸುತ್ತದೆ.

SS SS SS SS

ಲಾರ್ಡ್ ಲಿನ್ಲಿತ್ಗೋರವರಿಗೆ ಒಂದು ಕೊಬ್ಬಿದ ಬೀಜದ ಹೋರಿಯನ್ನೂ, ಲೇಡಿ ಲಿನ್ಲಿತ್ಗೋರವರಿಗೆ ಕ್ಷಯ ರೋಗದ ಆಸ್ಪತ್ರೆಯನ್ನು ತೆರೆಯುವ ಬಗ್ಗೆ ಒಂದು ಕಟ್ಟೋಣವನ್ನೂ, ಶ್ರೀ. ಗಾಂಧಿಯವರಿಗೆ ಒಂದು ಮುದಿ ದನವನ್ನೂ, ಸಾರ್ವಜನಿಕರಿಗೆ ಒಂದು ರೇಡಿಯೋವನ್ನೂ ಅಧ್ಯಕ್ಷರು ಸ್ವಂತ ಖರ್ಚಿನಿಂದ ಕೊಡಬೇಕೆಂದು ನಿರ್ಣಯವಾಯಿತು.

ಇದಕ್ಕೆ ಮಿ. ಕರಿಮುದ್ದೀನರು ಆಕ್ಷೇಪಿಸಿ, ದನವನ್ನು ಮಿ ಜಿನ್ನರಿಗೆ ಕೊಡಬೇಕೆಂದೂ, ಅದು ಮಾತ್ರ ಮುದಿಯಾಗಿರಬಾರದೆಂದೂ, ಗಾಂಧಿಯವರಿಗೆ ಒಂದು ಆಡನ್ನು ಕೊಡಬೇಕೆಂದೂ ಉಪಸೂಚನೆಯನ್ನು ತಂದರು. ಕೂಡಲೆ ಹಲವರು ಸದಸ್ಯರು ಎದ್ದು ನಿಂತು, ಠರಾವಿಗೆ ಮುಷ್ಟಿಯಲ್ಲೇ ತಮ್ಮ ತಿದ್ದುಪಡಿಗಳನ್ನು ತೋರ್ಪಡಿಸಿದರು. ಅಧ್ಯಕ್ಷರು ಸಮರ್ಪಕವಾಗಿ ಉತ್ತರವಿತ್ತ ಬಳಿಕ ಬಹಳ ಕಷ್ಟದಿಂದ ತಿದ್ದುಪಡಿಗಳು ಬೇರ್ಪಡಿಸಲ್ಪಟ್ಟವು. ಕಟ್ಟಕಡೆಗೆ ಅಲ್ಪ ಬಹುಮತದಿಂದ ಟರ್ಕಿಗೆ ಒಂದು ಸಾಹೇಬರ ಟೋಪಿಯನ್ನು ಕಳುಹಿಸಿ ಟರ್ಕಿಯೊಡನೆ ಭಾರತದ ಮೈತ್ರಿಯನ್ನು ವ್ಯಕ್ತಗೊಳಿಸಬೇಕೆಂದಾಯಿತು.

SS SS SS SS

ಆ ಬಳಿಕ ಮುಕ್ಕಾಲು ತಾಸಿನ ವಿರಾಮವಿತ್ತು. ಪೋಲೀಸರು ಬಂದು ಶಾಂತಿ ಸ್ಥಾಪನೆಗೊಳಿಸಿದ ಬಳಿಕ ಕೆಲವು ಸದಸ್ಯರನ್ನು ಆಸ್ಪತ್ರೆಗೆ ಸಾಗಿಸಲಾಯಿತು.

SS SS SS SS

ಅಧ್ಯಕ್ಷರು ಸಭೆಯ ಸದ್ವರ್ತನೆಗಾಗಿ ಅದನ್ನು ಅಭಿವಂದಿಸಿದ ಬಳಿಕ ಸಮಸ್ತ ರಾಷ್ಟ್ರದ ದೃಷ್ಟಿಯು ಅನುಕೂಲ ಸಿಂಧು ಪಕ್ಷದ ಮೇಲೆ ನೆಡಲ್ಪಡುವುದರಲ್ಲಿ ಸಂದೇಹವಿಲ್ಲವೆಂದರು. ಸಭೆಯಲ್ಲಿ ಒಡೆದು ನುಚ್ಚುನೂರಾದ ಗಾಜಿನ ಲೋಟಗಳ ಮತ್ತು ಆಸ್ಪತ್ರೆ ಖರ್ಚಿನ ಬಗ್ಗೆ ಸದಸ್ಯರು ವಂತಿಗೆಯನ್ನು ದಯೆ ಪಾಲಿಸಬೇಕೆಂದು ಅವರು ಸೂಚಿಸಿದರು. ಈ ಸಭೆಯ ವರದಿಯನ್ನು ಅಸೋಸಿಯೇಟೆಡ್ ಪ್ರೆಸ್ಸಿನ ಸತ್ಯವಾದಿಯಾದ ತಿರುಮಾಂಕೂರು ವಿಶೇಷ ಪ್ರತಿನಿಧಿಗೆ ಕಳುಹಿಸಿ ಅವಶ್ಯವಿರುವ ಹೆಚ್ಚುಕಡಿಮೆಗಳನ್ನು ಮಾಡಿ ಪ್ರಕಟಿಸಲು ಕೇಳಿಕೊಳ್ಳಬೇಕು—ಒಪ್ಪಿಗೆ.

——(೦)——



ಅಗಸನೊಬ್ಬ ಕತ್ತೆ ವಿಕ್ರಯಕ್ಕಿದೆ ಯೆಂದು ಜಾಹಿರಾತು ಮಾಡಿದ್ದ. ಒಂದು ದಿನ ಯಾರೋ ಬಾಗಿಲು ತಟ್ಟಿದಾಗ ಚಿಕ್ಕ ಹುಡುಗನೊಬ್ಬ ಕದ ತೆರೆದ.

"ಮಾರಾಟಕ್ಕಿರುವ ಕತ್ತೆಯ ಕುರಿತು ಕೇಳಲು ಬಂದಿದ್ದೇನೆ...." ಕೂಡಲೇ ಹುಡುಗ ಮನೆಯೊಳಗೆ ಹೋಗಿ-"ಅಪ್ಪಾ ನಿನ್ನನ್ನು ಕೇಳಲು ಬಂದಿದ್ದಾರೆ" ಎಂದ.

○O○

ಉಪಾಧ್ಯಾಯ: ನಿನ್ನ ಹೆಸರೇನು ಹುಡುಗಾ?

ಹೊಸ ವಿದ್ಯಾರ್ಥಿ: ಜೋಸೆಫ್ ತೌರೊ.

ಉಪಾಧ್ಯಾಯ: ನೀನು ಮಾತಾಡುವಾಗ ಯಾವಾಗಲೂ 'ಸರ್' ಎಂದು ಹೇಳಬೇಕು. ತಿಳಿಯಿತೇ?

ಹೊಸವಿದ್ಯಾರ್ಥಿ: (ತಪ್ಪನ್ನು ಸರಿ ಮಾಡಿಕೊಂಡಂತೆ) "ನನ್ನ ಹೆಸರು ಸರ್ ಜೋಸೆಫ್ ತೌರೊ"

○O○

ಗಂಡ: ನಮ್ಮ ರಾಮು ಚರಿತ್ರೆ ಪರೀಕ್ಷೆಯಲ್ಲಿ ಏನು ಮಾಡಿದ್ದಾನಂತೆ?

ಹೆಂಡತಿ: ಏನೂ ಮಾಡಲಿಲ್ಲ. ಪಾಪ, ಅವನು ಹುಟ್ಟುವ ಮೊದಲು ನಡೆದುದನ್ನು ಕೇಳಿದರೆ ಅವನು ಉತ್ತರಕೊಡುವುದು ಹೇಗೆ?

---

## ಹೌದು-ಅಲ್ಲ.

ಶ್ರೀ. ತಿರುಮಲೇಶರಾಯರೆಂದರೆ ವಿರೋಧಪಕ್ಷದ ಸಾಕ್ಷಿಗಾರರಿಗೆ ಅಡ್ಡಸವಾಲು ಹಾಕುವುದರಲ್ಲಿ ಬಹಳ ಪ್ರವೀಣರು.

ಒಬ್ಬ ಸಾಕ್ಷಿಗಾರನು ವಿಚಾರಣಾ ಕಾಲದಲ್ಲಿ ಬಹಳ ಉದ್ದುದ್ದವಾಗಿ ಮಾತಾಡುತ್ತಿದ್ದಾಗ-

"ಪುರಾಣ ಹೇಳುವುದು ಬೇಡ. ಹೌದೋ ಅಲ್ಲವೊ ಎಂದು ಹೇಳಿದರೆ ಸಾಕು" ಎಂದರು ವಕೀಲರು.

"ಆದರೆ ಹೌದು-ಅಲ್ಲವೆಂಬ ಉತ್ತರ ಕೊಡಲಾರದಂಥ ಕೆಲವು ಪ್ರಶ್ನೆಗಳಿವೆ." ಎಂದು ಸಾಕ್ಷಿಗಾರನು ವಾದಿಸಿದನು.

"ಅಂಥ ಪ್ರಶ್ನೆಗಳೇ ಇಲ್ಲ" ಎಂದು ವಕೀಲರ ಉತ್ತರ.

"ಹಾಗಾದರೆ ಈ ಪ್ರಶ್ನೆಗೆ ಉತ್ತರಕೊಡಿ" ಎಂದು ಸಾಕ್ಷಿಗಾರನು ಪ್ರಶ್ನಿಸಿದ: "ನಿಮ್ಮ ಹೆಂಡತಿಗೆ ಹೊಡೆಯುವುದನ್ನು ನೀವು ನಿಲ್ಲಿಸಿದ್ದೀರೋ?"

ವಕೀಲರು ಬಾಯ್ಮುಚ್ಚಿದರು!!

---

## ಸಮಸ್ಯೆಗಳು.

ರೈಲ್ವೇ ಸ್ಟೇಶನಿನಲ್ಲಿ ಕಲೆಕ್ಟರನು ನಿಮ್ಮ ಟಿಕೇಟನ್ನು ತೂತು ಮಾಡುವುದೇಕೆ?

ನೀವು ಅದರೊಳಗೆ ಪ್ರವೇಶಿಸುವುದಕ್ಕೆ.

○O○

ಹೂಜಿಗೆ ಕೈಯ್ಯಿರುವುದು ಯಾವ ಭಾಗದಲ್ಲಿ?

ಹೊರ ಭಾಗದಲ್ಲಿ.

○O○

ಮುತ್ತು ಎಂಬ ಶಬ್ದದಲ್ಲಿ "ತ್ತು" ಎಂಬುದು ಒತ್ತಕ್ಷರವಾಗಿರುವುದೇಕೆ?

ಇಬ್ಬಾಗದ ತುಟಿಗಳು ಹತ್ತಿರ ಬರುವಾಗ ತ್ಸು, ತ್ಸು ಎಂಬ ಶಬ್ದವಾಗುವುದರಿಂದ ಅವುಗಳನ್ನು ಒಟ್ಟು ಸೇರಿಸುವಾಗ: ತ್ಸು+ತ್ಸು=ತ್ತು ಎಂದಾಗುತ್ತದೆ. ಇದು ಪ್ರೇಮ ಸಂಧಿ.

---

## ಕೆಲವು ಹಿತಸೂಚನೆಗಳು.

ನಿಮ್ಮ ಬಟ್ಟೆಗಳಿಂದ ಕಲೆಗಳನ್ನು ತೆಗೆಯಬೇಕಾದರೆ ಕತ್ತರಿಯನ್ನುಪಯೋಗಿಸಿರಿ.

○○○

ಯಾರಾದರೂ ಪೆಟ್ಟುಕೊಟ್ಟರೆ ನಕ್ಕು ಬಿಡುವುದುತ್ತಮ.

---

**ಜಾಹಿರಾತುಗಳಲ್ಲಿರುವ ಗುಪ್ತವಿನೋದಗಳು.**

"ಕೋಣೆ ಬಾಡಿಗೆಗೆ ಸಿಗುತ್ತದೆ **ಸ್ತ್ರೀಯರಿಗೆ** ಮಾತ್ರ-೧೫ ಅಡಿ **ಉದ್ದ**, ೧೮ ಅಡಿ ಅಗಲ

oOo

"ದಂತದ ಕೈಯ್ಯ ಸ್ತ್ರೀಯ **ಕೊಡೆಯೊಂದು** ಬಸ್ಸಿನಲ್ಲಿ ಬಿಡ **ಲ್ಪಟ್ಟಿದೆ**. ಸಿಕ್ಕಿದವರು ದಯವಿಟ್ಟು ........ಳೂರಿನಲ್ಲಿರುವ ಶಾಂತಿಭವ **ನಕ್ಕೆ** ತಲುಪಿಸಿದರೆ ೧ ರೂಪಾಯಿ **ಬಹುಮಾನ!**

oOo

**ಅತ್ಯುತ್ತಮ** ಚಲಚ್ಚಿತ್ರ- "ದರಿ **ಯಾ** ದೌಲತ್" ಅಭಿನಯಿಸಿದವ **ರಲ್ಲಿ** ಕುಮಾರಿ ಪದ್ಮಾದೇವಿ- **೨೦೦೦ ಅಡಿ ಉದ್ದ!**

oOo

"ನಮ್ಮ ಗಟ್ಟಿರಂಗುಗಳು ಎಲ್ಲಾ **ಬಟ್ಟೆಗಳಿಗೊಪ್ಪುತ್ತವೆ**- ಸ್ತ್ರೀಯರು **ಅವುಗಳನ್ನು** ಹಾಕಿಕೊಳ್ಳಲು **ಮೆಚ್ಚುತ್ತಾರೆ.**"

---

**ಮುದ್ರಣ ಭೂತ.**

"ವಿಮಾದಾರರ ಸೌಕರ್ಯಗಳ ಸಲುವಾಗಿ **ಈ ಸಂಸ್ಥೆಯು ಮರಣದಿಂದ** ಅಥವಾ ಅವಧಿ ಮುಗಿಯುವುದರಿಂದ ಪತ್ರವು ದಾವೆಗೆ ಅರ್ಹವಾದಾಗ ವಿಮಾದಾರನ ಅಪೇಕ್ಷೆಯಂತೆ ಯಾವುದಾದರೊಂದು ರೀತಿಯಿಂದ ವಿಮಾದ್ರವ್ಯವನ್ನು ಸಲ್ಲಿಸುವುದು"

ಮೇಲಿನ ವಾಕ್ಯದಲ್ಲಿರುವ **"ಸಂಸ್ಥೆಯು"** ಎಂಬುದು **"ಸಂಸ್ಥೆಯು** ಎಂದಾಗಬೇಕಿತ್ತು. ಭೂತವು ಮಾಡಿರುವ ಅನರ್ಥವನ್ನು ನೋಡಿ.

---

**ಹೀಗೂ ಉಂಟೆ?**

ಒಂದು ವಿಮಾಕಂಪೆನಿಯ ನಿಯಮಾವಲಿಯಲ್ಲಿ ಕೆಳಗಿನ ವಾಕ್ಯವು ಅತ್ಯಂತ ಆಶ್ಚರ್ಯಕರವಾಗಿದೆ:

"೫೦ನೆ ವರ್ಷದೊಳಗೆ ಮರಣ ಸಂಭವಿಸಿದರೆ ಮುಂದಿನ ಕಂತುಗಳನ್ನು ತೆರಬೇಕಾಗಿಲ್ಲ"!

---

**ಕೆಲವು ವಿಚಿತ್ರ ಜಾಹಿರಾತುಗಳು.**

"**ಸ್ತ್ರೀಯರು** ಹೆತ್ತದಿನ ಶೀತವಾದ ಪರಿಹಾರಕ್ಕಾಗಿ ಕಸ್ತೂರಿಯ ಬದಲು ಈ ಮಾತ್ರೆಗಳನ್ನೇ **ಲಕ್ಷೋಪಲಕ್ಷ ಜನರುಪಯೋಗಿಸುತ್ತಾರೆ"**

oOo

**ತಲೆಗೊಂದು ಚಮಚ ಪಾತ್ರೆಗೊಂದು ಚಮಚ!**

ಒಂದು ಜಾಹೀರಾತಿನಲ್ಲಿ ಕೆಳಗಿನಂತೆ ಬರೆಯಲ್ಪಟ್ಟಿದೆ:

"ಟೀ ತಯಾರಿಸುವ ವಿಧಾನ: ಶುದ್ಧವಾದ ನೀರನ್ನು ಕುದಿಸಿರಿ. **ಶುಚಿಯಾಗಿರುವ ಮಣ್ಣಿನ** (ಪಿಂಗಾಣಿ) ಪಾತ್ರೆಯೊಂದನ್ನು ಬೆಚ್ಚಗೆ ಮಾಡಿರಿ. ಟೀ ಕುಡಿಯುವವರ ಸಂಖ್ಯೆಗೆ ತಕ್ಕಂತೆ **ತಲೆಗೆ ಒಂದು ಚಮಚ** ಮತ್ತು **ಪಾತ್ರೆಗೆ ಒಂದು ಚಮಚ.... ಟೀ ಸೊಪ್ಪನ್ನು ಹಾಕಿರಿ.** ತತ್‌ಕ್ಷಣ ಕುದಿಯುವ ನೀರನ್ನು ಅದರ ಮೇಲೆ ಹೊಯ್ಯಿರಿ . . . . ."

---



# ನಿಗೂಢ ಸಂಚಾರ



ಬರೆದವರು: "ಕುತರ್ಕಿ"

ನೀವೊಂದು ಕತೆಯನ್ನು ಕೇಳಿರಬಹುದು. ಪೂಜೆ ಭಟ್ಟರೊಬ್ಬರು ಬಾಗಿಲು ಮುಚ್ಚಿದ್ದ ದೇವಸ್ಥಾನದೊಳಗೆ ಪ್ರವೇಶಿಸಿದುದನ್ನು ಯಾರೋ ಕಂಡು ಕದ ತಟ್ಟಿದಾಗ — "ಇಲ್ಲ, ನಾನು ಬಾಳೆಹಣ್ಣು ತಿನ್ನುವುದಿಲ್ಲ" ಎಂದುತ್ತರವಿತ್ತರಂತೆ. ನಿಜವಾಗಿ ಆ ಭಟ್ಟರು ದೇವರಿಗಾಗಿಟ್ಟಿದ್ದ ಬಾಳೆಹಣ್ಣುಗಳನ್ನು ಸಂತೋಷದಿಂದ ತಿನ್ನುತ್ತಿದ್ದರು.

X X X X

ಪೂಜೆಭಟ್ಟರಿಗೂ ಬ್ರಿಟಿಷ್ ಉಪಮಂತ್ರಿಯರಿಗೂ ಹೇಗೆ ಗಂಟು ಬಿತ್ತೆಂದು ನೀವು ಖಂಡಿತವಾಗಿಯೂ ಪ್ರಶ್ನಿಸುವಿರೆಂದು ನನಗೆ ಮೊದಲೇ ತಿಳಿದಿದೆ. ಈ ಕಥೆಯನ್ನು ಹೇಳಲು ಒಂದು ಕಾರಣವಿದೆ. ಇತ್ತೀಚೆಗೆ ರಾಯಿಟರ್ ವಾರ್ತಾತಂತಿಯೊಂದರಲ್ಲಿ—ಬ್ರಿಟಿಷ್ ಉಪಮಂತ್ರಿಗಳಾದ ಕರ್ನಲ್ ಮ್ಯೂರ್‌ಹೆಡ್‌ರವರು ಭಾರತಕ್ಕೆ ಬರುವುದು ಫೆಡರೇಶನಿನ ಕುರಿತು ಕಾರ್ಯ ನಡೆಸಲಿಕ್ಕಲ್ಲವೆಂದು ಹೇಳಲ್ಪಟ್ಟಿತ್ತು.

X X X X

ಬ್ರಿಟಿಷ್ ಚಾಣಾಕ್ಷತೆಯ ಗುಟ್ಟನ್ನು ಮೊದಲೇ ರಟ್ಟುಗೊಳಿಸಿರುವುದನ್ನು ನೋಡುವಾಗ ಉಪಮಂತ್ರಿಯರ ಸಂಚಾರದಿಂದ ವಿಶೇಷ ಪ್ರಯೋಜನವಾಗಬಹುದೆನ್ನಲಾಗುವುದಿಲ್ಲ. ಈ ತರದ ಚಾಣಾಕ್ಷತೆಗೂ ಮಕ್ಕಳಾಟಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲವೆಂದು ಭಾವಿಸೋಣ. ಬ್ರಿಟಿಷ್ ಹಂಚಿಕೆಯು ಬಯಲಾದುದು ಇದು ಮೊದಲನೆ ಬಾರಿಯಲ್ಲ. ಲಾರ್ಡ್ ಲಿನ್ಲಿತ್ಗೋರವರು ಲಂಡನಿಗೆ ಫೆಡರೇಶನಿನ ಕುರಿತು ಚರ್ಚಿಸಲು ಹೋಗಿರುವುದಲ್ಲವೆಂದು ಹೇಳಿ ಲಾರ್ಡ್ ಝುಟ್ಲೆಂಡರು ತಮ್ಮ "ಹಿತ್ತಾಳಿಯನ್ನು ಹೊರಗೆ ಹಾಕಿದ್ದಾರೆ."

X X X X

ಸರಿ. ಕರ್ನಲ್ ಮ್ಯೂರ್‌ಹೆಡ್‌ರವರು ಫೆಡರೇಶನಿನ ಕುರಿತು ಚರ್ಚಿಸಲು ಬರುವುದಲ್ಲವೆಂದು ಕಣ್ಣು ಮುಚ್ಚಿ ಒಪ್ಪಿಕೊಳ್ಳೋಣ. ಆದರೆ ಮತ್ತಾವುದಕ್ಕಾಗಿ ಅವರ ಬರುವುದು? ಅಜಂತದ ಸುಂದರ ಕಲೆಗಳನ್ನು ಕಾಣಲಿಕ್ಕಾಗಿಯೆ? ಮಿ। ಜಿನ್ನರು ಕೇಂದ್ರ ವಿಧಾಯಕ ಸಭೆಯಲ್ಲಿ ಬ್ರಿಟಿಷ್ ಸರಕಾರಕ್ಕೆ ಮಾಡಿರುವ ಉಪಕಾರಕ್ಕಾಗಿ ಅವರನ್ನು ಅಭಿವಂದಿಸುವುದಕ್ಕಾಗಿಯೆ? ಇಲ್ಲವೆ ಡಾ। ಖರೆಯವರ ಪ್ರಜಾಸತ್ತಾತ್ಮಕ ತತ್ವ ಪರಿಪಾಲನೆಗಾಗಿ ಅವರಿಗೊಂದು ಹಸ್ತಲಾಘವ ಕೊಡಲಿಕ್ಕಾಗಿಯೆ?

X X X X

ಮತ್ತಾವುದಕ್ಕಾಗಿ ಅವರು ಬರುವುದು? ಕರ್ನಲ್ ಮ್ಯೂರ್ ಹೆಡ್‌ರವರು ಮದ್ರಾಸಿಗೆ ಹಿಂದಿ ಕಲಿಯುವುದಕ್ಕಾಗಿ ಅಷ್ಟು ದೂರದಿಂದ ಬರಲಿಕ್ಕಿಲ್ಲ. ಸೇಲಮಿನ ಮದ್ಯಪಾನ ನಿಷೇಧ ಕಾಯಿದೆಯ ಯಶಸ್ಸಿನ ಮಟ್ಟವನ್ನಳೆಯಲು ಬರಲಿಕ್ಕಿಲ್ಲ. ಸರ್ ಕೆ. ವಿ. ರೆಡ್ಡಿಯವರನ್ನು ಅಭಿವಂದಿಸಲು ಬರುವ ಯೋಚನೆ ಮಾಡಲಿಕ್ಕಿಲ್ಲ. ಅಥವಾ ಫಜ್ಲುಲ್ ಹಕ್ಕರ ಹುಲಿಸಿಂಹಾವತಾರವನ್ನು ನೋಡಲಿಕ್ಕೂ ಬರಲಿಕ್ಕಿಲ್ಲ. ಮಹಾತ್ಮಾಜಿಯರನ್ನು ಕಂಡು ಸೋಯಾಬೀಜದಲ್ಲಿ "ವಿಟಮಿನು"ಗಳು ಎಷ್ಟಿವೆಯೆಂದು ಕೇಳಲಿಕ್ಕಾಗಿರಲಿಕ್ಕಿಲ್ಲ. ಇದೂ ಅಲ್ಲದಿದ್ದರೆ ಸಂಸ್ಥಾನಗಳ ಕಾಡುಗಳಲ್ಲಿ ಹುಲಿ ಬೇಟೆ ಮಾಡಲಿಕ್ಕವರು ಬರಬಹುದೆ? ಸಂಸ್ಥಾನಗಳ ರಾಜರಿಂದ ಕಾಣಿಕೆಗಳನ್ನು ಸ್ವೀಕರಿಸಲು ಬರಬಹುದೆ?

X X X X

ಇದೊಂದು ಅಲ್ಲ. ಅವರು ಸಂದರ್ಶನವು ಫೆಡರೇಶನ್ ಸಂಬಂಧವಾಗಿದೆ. ೧೯೪೦ರಲ್ಲಿ ಫೆಡರೇಶನನ್ನು ಜಾರಿಗೆ ತರಬೇಕೆಂದು ಬ್ರಿಟಿಷ್ ಸರಕಾರದ ಯೋಜನೆಯು ಹೇಳುತ್ತಿದೆ. ಸದ್ಯದಲ್ಲಿಯೇ ಸಂಸ್ಥಾನಗಳ ನರೇಂದ್ರರ ಪ್ರತಿನಿಧಿಗಳು ಅಭಿನವ ಕೈಲಾಸವಾದ ಸಿಮ್ಲಕ್ಕೆ ತೆರಳಿ ಮುಂಬರುವ ಕಾಯಿದೆಯ ಕುರಿತು ಚರ್ಚಿಸಲಾರಂಭಿಸುವರು. ಲಾರ್ಡ್ ಲಿನ್ಲಿತ್ಗೋರವರು ನವಂಬರದಲ್ಲಿ ಲಂಡನಿನಿಂದ ಹಿಂತಿರುಗಿ ಫೆಡರಲ್ ವಿಭಾಗದ ಸೆಕ್ರೆಟೇರಿಯಟನ್ನು ತೆರೆಯುವರು.

X X X X

ಕರ್ನಲ್ ಮ್ಯೂರ್‌ಹೆಡ್‌ರವರು ಬ್ರಿಟಿಷ್ ಮಂತ್ರಿ ಮಂಡಲದ ಇಚ್ಛೆಯಂತೆಯೇ ಫೆಡರೇಶನನ್ನು ಭಾರತದಲ್ಲಿ ಜಾರಿಗೆ ತರಲಿಕ್ಕಾಗಿ ಬೇಕಾದ ಸಿದ್ಧತೆಗಳನ್ನು ಮಾಡಲು ಬರುವರು. ಸಂಸ್ಥಾನಗಳ ಕೆರೆಗಳಲ್ಲಿ ಇಷ್ಟರ ತನಕ ಚಲಿಸದಿದ್ದ ಕೊಳಕು ನೀರನ್ನು ಕಾಂಗ್ರೆಸ್ ಜಲಧಾರೆಯು ಹರಿಯುವಂತೆ ಮಾಡಿರುವುದರಿಂದ, ಸಾಮ್ರಾಜ್ಯಶಾಹಿಯ ಹಾವಸೆಗಳು ಸಿಕ್ಕಾಬಟ್ಟೆ ಚೆದರಿವೆ.

X X X X

ಬೋಸ್- ಸತ್ಯಮೂರ್ತಿಯರ ವಿವಾದದ ಬಳಿಕ ಫೆಡರೇಶನಿನ ಪ್ರಶ್ನೆಯೇ ಕಾಂಗ್ರೆಸಿನ ಯಾವ ಧುರೀಣರಿಂದಲೂ ಚರ್ಚಿಸಲ್ಪಡಲಿಲ್ಲ. ವಾರ್ಧದಲ್ಲಿ ಸೇರಿದ ಸಭೆಯಲ್ಲಿ ಇದರ ಪ್ರಸ್ತಾಪವಿದ್ದಿಲ್ಲ. ಡಿಲ್ಲಿಯ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಸಭೆಯಲ್ಲಿ ಚರ್ಚಿಸುವುದೂ ಕಷ್ಟವೇ ಸರಿ. ಇವೆಲ್ಲವನ್ನೂ ನೋಡುವಾಗ "ಇಂಡಿಯಾ ಆಕ್ಟನ್ನು ಮಣ್ಣು ಪಾಲು ಮಾಡಿದಂತೆ"ಯೇ ಫೆಡರೇಶನು ಕೂಡಾ ಮಾಡಲ್ಪಡುವುದೋ ಎಂಬ ಸಂಶಯವುತ್ಪನ್ನವಾಗುತ್ತಿದೆ.

X X X X

ಕರ್ನಲ್ ಮ್ಯೂರ ಹೆಡ್‌ರವರು ಬ್ರಿಟನಿನಿಂದ ಭಾರತಕ್ಕೆ ರಾಶಿಗಟ್ಟಲೆಯಾಗಿ ಬರುತ್ತಿರುವ ತಜ್ಞರಲ್ಲೊಬ್ಬರಾಗಿರಬಹುದು. ಭಾರತ ಬ್ರಹ್ಮದೇಶಗಳಲ್ಲಿ ಸಂಚರಿಸಿ ಅವರು ಹಲವರು ಮಂದಿ ಜಿನ್ನರನ್ನು ಬ್ರಿಟಿಷ್‌ತಜ್ಞರನ್ನಾಗಿ ಮಾಡಬಹುದು. ಇವರ ಸಂಚಾರ ಕಾಲದಲ್ಲಿ ಫೆಡರೇಶನನ್ನು ಭಾರತವು ಹೇಗೆ ಸ್ವೀಕರಿಸುವುದೆಂಬುದನ್ನು ಯಾವ ರೀತಿಯಲ್ಲಿ ಪ್ರದರ್ಶಿಸಬಹುದೆಂಬುದು ಕಾಂಗ್ರೆಸಿನ ಧೋರಣೆಯ ಮೇಲೆ ಹೊಂದಿಕೊಂಡಿದೆ. ಉಪಮಂತ್ರಿಗಳು ನಗುಮುಖದಿಂದಲೆ ಇಂಗ್ಲೆಂಡಿಗೆ ಹಿಂತೆರಳಬಹುದೋ ಎಂಬುದನ್ನು ನೋಡಬೇಕಾಗಿದೆ.



# ಜಾಗ್ರತ ಭಾರತದಲ್ಲಿ



## ಮಲಬಾರು ದೇವಸ್ಥಾನ ಪ್ರವೇಶ ಮಸೂದೆ.

ಮದ್ರಾಸ್ ಸರಕಾರದವರು ಮಲಬಾರ್ ದೇವಸ್ಥಾನ ಪ್ರವೇಶ ಮಸೂದೆಯನ್ನು ಪ್ರಕಟಿಸಿದ್ದಾರೆ. ಕೇರಳದ ಸಮೀಪದಲ್ಲಿರುವ ತಿರುವಾಂಕೂರಿನಲ್ಲಿ ದೇವಸ್ಥಾನಗಳಿಗೆ ಪ್ರವೇಶವಿರುವುದರಿಂದ ಮಲಬಾರಿನಲ್ಲಿ ಮೊದಲು ಜಾರಿಗೆ ತಂದರೆ ಅದರ ಪ್ರಭಾವದಿಂದಾಗಿ ಈ ಮಸೂದೆಯು ಯಶಸ್ವಿಯಾಗುವುದೆಂದು ಸರಕಾರವು ಅಭಿಪ್ರಾಯಪಟ್ಟಂತಿದೆ. ಎಲ್ಲಾ ಜಿಲ್ಲೆಗಳಲ್ಲಿ ಒಮ್ಮೆಯೇ ಮದ್ಯಪಾನ ನಿಷೇಧ ಕಾಯಿದೆಯನ್ನು ಜಾರಿಗೆ ತರುವುದರಿಂದ ಸರಕಾರದ ಉತ್ಪತ್ತಿಯಲ್ಲಿ ನಷ್ಟವಾಗುವಂತೆ ಈ ಮಸೂದೆಯನ್ನು ಇಡೀ ಸಂಸ್ಥಾನದಲ್ಲಿ ಜಾರಿಗೆ ತಂದರೆ ವಿಶೇಷ ತೊಂದರೆಯಾಗುವಂತಿಲ್ಲ. ಈಗಿನ ಮಸೂದೆಯನ್ನು ನೋಡುವಾಗ ಜವಾಬ್ದಾರಿಯನ್ನು ಸಾಮಾನ್ಯ ಮಟ್ಟಿಗೆ ದೇವಸ್ಥಾನಗಳ ಮೊಕ್ತೇಸರರ ಮೇಲೆ ಹೊರಿಸಿದಂತಿದೆ. ಪ್ರಬಲ ಸಾರ್ವಜನಿಕ ಅಭಿಪ್ರಾಯದ ಬೆಂಬಲವಿರುವಾಗ ಜನಪ್ರಿತ ಸರಕಾರವು ಇಡೀ ಪ್ರಾಂತ್ಯದಲ್ಲಿ ಈ ಮಸೂದೆಯನ್ನೇಕೆ ಜಾರಿಗೆ ತರಬಾರದೆಂಬುದು ಗಣನೀಯ ಸೂಚನೆಯಾಗಿದೆ.



ಸಾರ್ವಜನಿಕ ಉಪದ್ರವ. ೧



ಬೀದಿಯಲ್ಲಿ ಬಾಳೆಹಣ್ಣು ತಿಂದು ಸಿಪ್ಪೆ ಬಿಸಾಡುವುದು.

## ತಿರುವಾಂಕೂರಿನ ಅವ್ಯವಸ್ಥೆ

ತಿರುವಾಂಕೂರು ಸಂಸ್ಥಾನದಲ್ಲಿ ಪುರಾತನ ಪದ್ಧತಿಗನುಸಾರವಾಗಿ ರಾಜತ್ವವು ಅನುಕರಿಸಲ್ಪಡುತ್ತಿದೆಯೆಂದು ಅಲ್ಲಿಯ ರಾಜರು ಅಪ್ರಾಯಸ್ಥರಾಗಿದ್ದಾಗ ಅವರ ತಾಯಿಯ ಹಿರಿಯಕ್ಕನವರು ಆಡಳಿತೆಯನ್ನು ವಹಿಸಿದ್ದುದರಿಂದ ಸ್ಪಷ್ಟವಾಗುತ್ತದೆ. ಈಗ ತಿರುವಾಂಕೂರಿನಲ್ಲಿ ರಾಜರು ಪೂರ್ಣಾಧಿಕಾರವನ್ನು ಅನುಭವಿಸುತ್ತಿರುವುದಲ್ಲದೆ ಅವರ ತಾಯಿ ತನ್ನ ಪ್ರಭಾವವನ್ನು ನಡೆಸುತ್ತಿದ್ದಾರೆ. ಈಗಿನ ಮಹಾರಾಣಿಯವರು ಸ್ವಲ್ಪ ಸಮಯ ಯುರೋಪು ಸಂಚಾರ ಮಾಡಿದುದರ ಫಲಿತಾಂಶವಾಗಿ ತಮ್ಮ ಸಂಸ್ಥಾನದಲ್ಲಿ ಕೆಲವು ಸುಧಾರಣೆಗಳನ್ನು ಜಾರಿಗೆ ತಂದರು. ತಿರುವಾಂಕೂರಿನ ಈಗಿನ ದಿವಾನರಾದ ಸರ್. ಸಿ. ಪಿ. ರಾಮಸ್ವಾಮಿ ಐಯ್ಯರ್‌ರವರು ಘಟನಾತ್ಮಕ ಸರಕಾರದಲ್ಲಿ ವಿಶೇಷ ಅವಿಶ್ವಾಸವುಳ್ಳವರಲ್ಲದಿದ್ದರೂ, ರಾಜತ್ವದ ತತ್ವಗಳನ್ನು ಅವರು ನಂಬಿರುವದರಿಂದ ಆ ಸಂಸ್ಥಾನದಲ್ಲಿ ರಾಜತ್ವ ಮತ್ತು ಘಟನಾತ್ಮಕ ತತ್ವಗಳಿಗೆ ಘರ್ಷಣೆಯಾಗಲಾರಂಭಿಸಿದೆ.

ತಿರುವಾಂಕೂರಿನಲ್ಲಿ ತಲೆದೋರಿರುವ ಅವ್ಯವಸ್ಥೆಗೆ ಮೂಲ ಕಾರಣವೆಂದರೆ ಸರ್. ಸಿ. ಪಿ. ಯವರು ರಾಜತ್ವದ ತತ್ವಗಳನ್ನು ಪರಿಪಾಲಿಸಲಿಕ್ಕಾಗಿ ಘಟನಾತ್ಮಕ ಸುಧಾರಣೆಗಳಿಗೆ ಪ್ರಚಂಡ ವಿರೋಧವನ್ನು ಕಾರ್ಯತಃ ವ್ಯಕ್ತಪಡಿಸಿರುವುದರಿಂದಾಗಿ. ತಿರುವಾಂಕೂರಿನ ರಾಜಕೀಯ ಮುತ್ಸದ್ದಿಗಳಿಗೆ ಸುಧಾರಣೆಗಳು ಘಟನಾತ್ಮಕ ವಿಧಾನಗಳಿಂದ ಸಿಗಬೇಕಾಗಿರುವುದರಿಂದ ಪ್ರಜೆಗಳಿಗೂ, ಆಳರಸರಿಗೂ ಸ್ವಾಭಾವಿಕವಾಗಿ ಘರ್ಷಣೆಯಾಯಿತು. ಈ ಅಭಿಪ್ರಾಯ ವ್ಯತ್ಯಾಸವು ಶ್ರೀಮತಿ ಕಮಲಾದೇವಿಯರು ವಿದ್ಯಾರ್ಥಿ ಪರಿಷತ್ತಿಗೆಂದು ಅಲ್ಲಿಗೆ ಹೋದಾಗ ಒಂದು ರೂಪವನ್ನು ತಾಳಿತು. ತಿರುವಾಂಕೂರು ಸರಕಾರವು ಅವರ ಪ್ರವೇಶವನ್ನು ನಿಷೇಧಿಸಿರುವುದು ಕಾಂಗ್ರೆಸ್‌ಮಹಿಳೆಯೆಂಬ ನೆಲೆಯಿಂ

ದಲ್ಲವೆಂದು ಅದೇ ಕಾಲದಲ್ಲಿ ಸಂಸ್ಥಾನದ ಆತಿಥ್ಯವನ್ನು ಪಡೆಯುತ್ತಿದ್ದ ಕಾಂಗ್ರೆಸ್ ಸ್ತ್ರೀ ರಾಜಕುಮಾರಿ ಅಮೃತ ಕೌರ್‌ರವರ ನಿದರ್ಶನದಿಂದಲೇ ವ್ಯಕ್ತವಾಗುತ್ತದೆ. ಶ್ರೀಮತಿ ಕಮಲಾದೇವಿಯರ ಮೇಲೆ ನಿಷೇಧವನ್ನು ಜಾರಿ ಮಾಡಿರುವುದು ಅವರ ಕಮ್ಯೂನಿಸಮಿಗಾಗಿ ಎಂದು ದಿವಾನರು ಈಗ ವಾದಿಸುತ್ತಿರುವುದು ಶುಷ್ಕವಾಗಿದೆ. ಕಾರಣ—ಅವರು ಕಾಂಗ್ರೆಸ್ ಸೋಶಿಯಲಿಸ್ಟ್ ಎಂಬ ಚಿಕ್ಕ ಪಕ್ಷಕ್ಕೆ ಸೇರಿದವರು. ಈ ಪಂಗಡದವರನ್ನು ಕಮ್ಯೂನಿಸ್ಟರು ಜನತಾ ಸರ್ವಾಧಿಕಾರದ ದೃಷ್ಟಿಯಿಂದ ಭಂಡವಲಗಾರರಿಂದಲೂ ಕಡೆಯೆಂದು ಭಾವಿಸುತ್ತಾರೆ. ಈ ವಿಚಾರವು ಇತ್ತೀಚಿಗಿನ ಗೋಳೀಬಾರಿನಿಂದ ಮೂಲೆಪಾಲಾಗಿದೆ. ಯಾವ ಸರಕಾರವಾದರೂ ಗುಂಡೆಸೆತಕ್ಕೆ ಪ್ರಾರಂಭಿಸಿತೆಂದರೆ ಜನಾಭಿಪ್ರಾಯವು ಕೂಡಲೆ ಅದಕ್ಕೆ ವಿರೋಧವಾಗುತ್ತದೆಂಬುದರಲ್ಲಿ ನಿರ್ವಿವಾದ. ಸರ್. ಸಿ. ಪಿ.ಯವರನ್ನು ಭಾರತದ ಹಲವೆಡೆಗಳಲ್ಲಿ ಲಾರ್ಡ್ ವಿಲ್ಲಿಂಗ್ಡನರ ಪ್ರತಿರೂಪವೆಂದು ಕರೆದಿದ್ದಾರೆ. ತಿರುವಾಂಕೂರಿನಲ್ಲಿ ನಡೆದ ಕ್ರೂರ ಕೃತ್ಯಗಳ ವಿಚಾರಣೆಯಾಗಬೇಕಾದುದು ಅತ್ಯವಶ್ಯವಾಗಿದೆ. ಈ ವಿಚಾರಣೆಯನ್ನು ಅಲ್ಲಿಯ ರಾಜರಿಗೆ ವಿಧೇಯರಾಗಿಲ್ಲದವರು ನಡೆಸಬೇಕಾಗಿದೆ. ಒಟ್ಟಿನ ಮೇಲನ್ನುವುದಿದ್ದರೆ ಸರ್. ಸಿ. ಪಿ. ಯವರ ರಾಜ್ಯಭಾರವು ಯಾರಿಗೂ ಸಮಾಧಾನಕರವಾದುದಲ್ಲ ಎಂದು ಹೇಳಬೇಕಾಗುತ್ತದೆ.

## ಸಂಸ್ಥಾನಗಳ ಮರುಳು ವಿಧಾನ

ಇತ್ತೀಚೆಗೆ ಸಂಸ್ಥಾನಗಳಲ್ಲಿ ಪ್ರಜೆಗಳು ಜವಾಬ್ದಾರೀ ಸರಕಾರಕ್ಕಾಗಿ ಚಳವಳವನ್ನು ಮಾಡಲು ಪ್ರಾರಂಭಿಸಿದ್ದಾರೆ. ಘಟನಾತ್ಮಕ ವಿಧಾನವು ರಾಜತ್ವದ ತತ್ವಗಳಿಗೆ ವಿರೋಧವಾದುದರಿಂದ ಇಂತಹ ಚಳವಳಗಳೇ ನಡೆಯಬಾರದೆಂಬ ನಿಯಮಗಳನ್ನು ಮಾಡಿ ನರೇಂದ್ರರೇ ಅನವಶ್ಯಕದ ಗೊಂದಲವನ್ನೆಬ್ಬಿಸುತ್ತಿರುವುದು ಕೇವಲ ಹುಚ್ಚುತನವೆನ್ನುವುದರಲ್ಲಿ ನಿರ್ವಿವಾದ.

## ಮಧ್ಯಪ್ರಾಂತದ ಗೊಂದಲ

ಇನ್ನೂ ಮುಗಿದಿಲ್ಲ. ರಾಷ್ಟ್ರಪತಿ ಬೋಸ್ ಮತ್ತು ಡಾ. ಖರೆಯವರೊಳಗೆ ವಾದಯುದ್ಧವು ನಡೆಯುತ್ತಲೇ ಇದೆ. ಸೆಪ್ಟೆಂಬರ ೨೦ರಂದು ನಾಗಪುರದಲ್ಲಿ ಕಾಂಗ್ರೆಸ್ ಕೆಲಸಗಾರರ ಸಭೆಯೊಂದು ಶ್ರೀ. ಎಂ. ಎನ್. ರೋಯ್—ಇವರ ಅಧ್ಯಕ್ಷತೆಯಲ್ಲಿ ಜರಗಲಿದೆ. ಈ ಸಭೆಯಲ್ಲಿ—ನರಿಮನ್ ಮತ್ತು ಖರೆ ವಿಚಾರಗಳ ಕುರಿತು ಯೋಗ್ಯ ವಿಚಾರಣೆಯಾಗಬೇಕಲ್ಲದೆ 'ಕಾಂಗ್ರೆಸಿನಲ್ಲಿರುವ ಫ್ಯಾಸಿಸ್ಟ್ ಮನೋವೃತ್ತಿಯು ಹೋಗಬೇಕು' ಎಂಬ ವಿಚಾರವು ಚರ್ಚಿಸಲ್ಪಡುವುದು.

## ದಕ್ಷಿಣ ಭಾರತದಲ್ಲಿ ಭೂಕಂಪ.

ಕಳೆದ ತಾ. ೧೧ ರಂದು ದಕ್ಷಿಣ ಭಾರತದ ಹಲವೆಡೆಗಳಲ್ಲಿ ಭೂಕಂಪವಾಯಿತು. ಇದರಿಂದ ಅನಾಹುತವಾಗದಿದ್ದರೂ ದಕ್ಷಿಣ ಭಾರತದಲ್ಲಿ ಭೂಕಂಪವಾದುದು ಇದೇ ಮೊದಲನೆ ಬಾರಿಯಾಗಿದೆ.

## ಸಿಂಧ್ ಮಂತ್ರಿಮಂಡಲಕ್ಕೆ ಕಾಂಗ್ರೆಸ್ ಬೆಂಬಲ!

ಸಿಂಧ್ ಪ್ರಾಂತ್ಯದ ಇಲಾಹಿ ಬಕ್ಷ್ ಮಂತ್ರಿಮಂಡಲಕ್ಕೆ ಕಾಂಗ್ರೆಸ್ ಬೆಂಬಲವನ್ನೀಯುವ ನಿರ್ಣಯ ಮಾಡಿದೆ. ಅಲ್ಲಿಯ ಮಂತ್ರಿಮಂಡಲಕ್ಕೆ ಬಹುಮತವಿಲ್ಲದಿರುವುದರಿಂದ ಕಾಂಗ್ರೆಸಿನ ಬೆಂಬಲದ ಮೇಲೆ ಅದು ಹೊಂದಿಕೊಂಡಿರಬೇಕಾಗಿದೆ. ವಾರ್ಧಾದಲ್ಲಾದ ನಿರ್ಣಯದಿಂದ ಇಲಾಹಿ ಬಕ್ಷ್ ಮಂತ್ರಿಮಂಡಲಕ್ಕೆ ಕಾಂಗ್ರೆಸ್ ಪೂರ್ಣ ಬೆಂಬಲವನ್ನು ಕೊಡುವಂತಿಲ್ಲವೆಂದು ವ್ಯಕ್ತವಾಗುತ್ತದೆ. ಸಿಂಧದ ಬಿಕ್ಕಟ್ಟು ಸದ್ಯದ ಪರಿಸ್ಥಿತಿಯಲ್ಲಿ ಬಗೆಹರಿದಂತಾಗುವುದಿಲ್ಲ.

## ಪರಾಮರ್ಶೆ

**ಚಿತ್ರ:**

ಮಂಗಳೂರಿನ “ಕಲಾವಿದರ ಕಲಾಸಂಘ”ದವರು ಹೊರಡಿಸುವ ಮಾಸಪತ್ರಿಕೆಯಿದು. ಉತ್ಸಾಹೀ ತರುಣರಾದ ಮಾಸ್ಟರ್ ವೆಂಕಣ್ಣನವರು ಈ ಪತ್ರಿಕೆಯ ಸಂಪಾದಕರು. ಅಷ್ಟಪತ್ರದ ೫೬ ಪುಟಗಳನ್ನೊಳಗೊಂಡಿದೆ. ಚಲನಚಿತ್ರಗಳಿಗೆ ಸಂಬಂಧಪಟ್ಟ ಕನ್ನಡ ಮತ್ತು ಇಂಗ್ಲಿಷ್ ಲೇಖನಗಳಿವೆ. ಹಲವಾರು ನಟನಟಿಯರ ಭಾವಚಿತ್ರಗಳಿರುವುದರಿಂದ ಪತ್ರಿಕೆಯ ಮೈಗಟ್ಟು ಚೆನ್ನಾಗಿದೆ.

## ಐರೋಪ್ಯ ಯುದ್ಧ?

ಯುರೋಪಿನ ಹೃದಯ ಕಮಲದಂತಿರುವ ಪ್ರಜಾಸತ್ತಾತ್ಮಕ ಜೆಕೊಸ್ಲೊವೇಕಿಯದ ಅಪಾರ ಸಂಪತ್ತನ್ನು ಕಂಡು ಹೆರ್ ಹಿಟ್ಲರರು ಇತರ ರಾಷ್ಟ್ರಗಳ ವಿರೋಧವನ್ನು ಲೆಕ್ಕಿಸದೆ ಬೆದರಿಕೆ ಹಾಕಿದ್ದಾರೆ. ನೊಬೆಲ್ ಶಾಂತಿ ಬಹುಮಾನವನ್ನು ಪಡೆದ ಸರ್ ನಾರ್ಮಲ್ ಏಂಜಲ್ ರವರು ಹೇಳಿರುವಂತೆ ಯುದ್ಧರಂಗಕ್ಕೆ ಕಾಲಿಟ್ಟೊಡನೆಯೇ ಜರ್ಮನಿಯು ಶಕ್ತಿಶೂನ್ಯವಾಗುವುದೆಂದು ಹಿಟ್ಲರರಿಗರಿತಿದೆ. ಯುದ್ಧವು ಪ್ರಾರಂಭಿಸುವುದೇ ತಡ, ಜರ್ಮನಿಯ ಸೈನ್ಯಾಧಿಕಾರಿಗಳು ಅವರಿಗೆ ಎಂದಿನಂತೆ ವಿಧೇಯರಾಗಿ ನಡೆಯುವಂತಿಲ್ಲ. ಕೈಸರರಿಗೆ ಯಾವ ಅವಸ್ಥೆಯು ಬಂದೊದಗಿತ್ತೋ ಅದೇ ಪಾಡು ಹಿಟ್ಲರರದಾಗುವುದೆಂಬುದರಲ್ಲಿ ನಿಸ್ಸಂಶಯ. ಫ್ರಾನ್ಸ್, ರಷ್ಯ, ಜೆಕೊಸ್ಲೊವೇಕಿಯ ಮತ್ತು ಬ್ರಿಟನುಗಳು ಎಷ್ಟರ ತನಕ ಒಂದಾಗಿರುತ್ತವೋ ಅಷ್ಟರ ತನಕ ಹಿಟ್ಲರರು ಯುದ್ಧ ಮಾಡುವಂತಿಲ್ಲ. ಒಂದು ವೇಳೆ ಮಾಡಿದರೂ ಅದು ಇತ್ತೀಚೆಗಿನ ಸೊವಿಯೆಟ್ ಜಪಾನ್ ಯುದ್ಧದಂತಾಗುವುದು. ಜರ್ಮನಿಯ ಆರ್ಥಿಕ ಪರಿಸ್ಥಿತಿಯು ಪರಿಪೂರ್ಣ ಕೆಟ್ಟಿರುವುದರಿಂದ ನಾಝೀ ಪಕ್ಷದ ಪತನವು ಸದ್ಯದಲ್ಲಿಯೇ ಆಗಲಿದೆಯೆಂಬುದರಲ್ಲಿ ನಿರ್ವಿವಾದ.

---

# ವಿಂಡ್ಸರ್ ಡ್ಯೂಕ

ವ್ಯಕ್ತಿ ಸ್ವಾತಂತ್ರ್ಯದ ರಕ್ಷ
ಒಡೆತನವನ್ನು

'ಎಡ್ವರ್ಡ್ ೯-೩

—

ಡ್ಯೂಕ್



ಡ್ಯೂಕ್ ಆಫ್ ವಿಂಡ್ಸರ್

ವಿಂಡ್ಸರ್ ಡ್ಯೂಕರ ಸ್ವಾರಸ್ಯಮಯ ಜೀವನದ ಅರಿವನ್ನು ಕನ್ನಡಿಗರಿಗೆ ಉಂಟುಮಾಡುವುದಕ್ಕಾಗಿ ಅಂತರಂಗದಲ್ಲಿ ಮುಂದಿನ ವಾರದಿಂದ ಸಚಿತ್ರವಾದೊಂದು ಲೇಖನ ಮಾಲೆಯು ಪ್ರಾರಂಭವಾಗುವುದು. ತನ್ನ ಪ್ರೇಮಿಕೆಯನ್ನು ವರಿಸಿ, ವ್ಯಕ್ತಿಸ್ವಾತಂತ್ರ್ಯವನ್ನು ಳಿಸಿಕೊಂಡಿರುವ ವಿಂಡ್ಸರ್ ಡ್ಯೂಕರ ಜೀವನ ಚರಿತ್ರೆಯು ಕನ್ನಡದಲ್ಲಿ ಈ ತನಕ ಬರೆಯಲ್ಪಡಲಿಲ್ಲವೆಂಬುದು ನಿಜವಾಗಿರುವುದರಿಂದ ಈ ಲೇಖನಮಾಲೆಯು ನಮ್ಮ ಓದುಗರಿಗೆ ರುಚಿಸದಿರದು.

□ □ □

ಇವರ ಜೀವನವು ನಮ್ಮ ಲೇಖ

ಕರಿಂದ ಮೊದಲು ಪ್ರ
ದಲ್ಲಿ ಬರೆಯಲ್ಪಟ್ಟರೂ,
ರ್ಘವಾಗಿರುವುದರಿಂದ
ಸೂಚನೆಯಂತೆ ಅದ
ರೂಪದಲ್ಲಿ ಅವರು
ಹೀಗೆ ಮಾಡಿರುವುದ
ಸೊಬಗು ಯಾವ ರೀ
ಕೆಡಲಿಲ್ಲವೆಂದು ಅವ
ಯನ್ನಿತ್ತಿದ್ದಾರೆ.

ಈ ಲೇಖನ ಮಾಲೆ
ಭಾವ ಚಿತ್ರಗಳನ್ನು ನ
ನಿಂದ ಈಗಾಗಲೇ
ದ್ದರೂ ಅವುಗಳ ಪಡಿ
ತಯಾರಾಗುತ್ತಿರುವುದ
ನದ ಪ್ರಕಟಣೆಗೆ ವಿ
ದಕ್ಕೆ ನಾವು ವಿಷಾದಿ
ಮುಂದೆ ಪ್ರಕಟವಾಗಲಿ
ನ ಭಾವಚಿತ್ರಗಳು ಹಿ
ಪ್ರಕಟವಾಗದಿರುವುದ
ಓದುಗರು ಈ ವೈ
ಪ್ರಶಂಸಿಸದಿರರೆಂದು ನ

□ □ □

ಮುಂದೆ ಪ್ರಕಟವಾ
ನಗಳು ಇದ್ದಕ್ಕಿದ್ದಂತೆ ಹ
ವಲ್ಲದೆ ಅವುಗಳು ಆಧಾ
ದುವುಗಳಾಗಿವೆ. ವಿಂ
ಕರ ಅಪ್ಪಣೆಯನ್ನು ಇ
ಗ್ಲಿಷ್ ಭಾಷೆಯಲ್ಲಿ ಅ

# ುತರಮ್ಯ ಜೀವನ

## ನ ಪ್ರಬಲ ಸಾಮ್ರಾಜ್ಯದ
## ೀರ ಯುವಕ

### ್ರಣಯ ಕಥೆ'

**ನ ಕಥೆ**

ು ಬರೆದ ಕೆಪ್ಪನ್ ಮೊ ದಲಾದ ಜಗತ್ಪ್ರಸಿದ್ಧ ಪುಸ್ತಕಗಳ ಆಧಾರ ೇಖನವು ಬರೆಯಲ್ಪಟ್ಟಿ

□ □

ಓನವನ್ನೋದುವ ವಿಂಡ್ಸರ್ ಡ್ಯೂಕರ ್ರಾರಂಭದಲ್ಲಿ ಅಷ್ಟೊಂ ವಾಗಿ ತೋರದಿದ್ದರೂ ಅತ್ಯಂತ ಸ್ವಾರಸ್ಯ ವೃದೆಂಬುದನ್ನು ಓದು ಬೇಕಾಗಿದೆ. ಲೇಖನ ಯೋಗ್ಯಾಯೋಗ್ಯತೆ ್ಣಯಿಸಬೇಕಾದರೆ ಅದ ರ್ಣವಾಗಿ ಓದಬೇಕೆಂ ಹೇಳಬೇಕಾಗಿಲ್ಲ. ಓದು ಚಿಯನ್ನು ಹೆಚ್ಚಿಸುವ ದ ಪ್ರಥಮ ಭಾಗಕ್ಕೆ ್ತ ಕೊಡುವ ಯತ್ನ

□ □

ಸಾಮ್ರಾಜ್ಯದ ಚರಿತ್ರೆ ಮಾತ್ರ ನಿದರ್ಶನವಾದ ಡ್ಯೂಕರ ಸಾಮ್ರಾಜ್ಯ ವೈಯಕ್ತಿಕ ಕಥೆಯಲ್ಲಿ ನ, ಮಹಾ ಯುದ್ಧದ ವಹಿಸಿದ ಭಾಗ, ಆಕ್ಸ



**ಡಚೆಸ್ ಆಫ್ ವಿಂಡ್ಸರ್**

ಫರ್ಡ್ ಜೀವನ, ಅವರ ವಿಶ್ವಸಂಚಾರ ಮೊದಲಾದುವು ಬರೆಯಲ್ಪಟ್ಟಿವೆ. ಅವರ ಸ್ವತಂತ್ರ ಮನೋವೃತ್ತಿಗೆ ಅವರ ಜವ್ವನದ ವಿಧಾನಗಳೇ ಮೂಲಕಾರಣವೆಂದು ವ್ಯಕ್ತವಾಗುತ್ತದೆ. ವಿಂಡ್ಸರ್ ಡ್ಯೂಕರು ಹಳೆ ಪದ್ಧತಿಗಳನ್ನು ಧಿಕ್ಕರಿಸಿ, ನರೇಂದ್ರರೆಂಬ ಶುಷ್ಕಾಭಿಪ್ರಾಯಕ್ಕೊಳಗಾಗದೆ ತನ್ನ ಜವ್ವನಾವಸ್ಥೆಯಲ್ಲಿಯೇ ಅಂಥ ವಿಶ್ವಾಸಿಗಳ ಕಟು ವಿಮರ್ಶೆಗೆ ಪಾತ್ರರಾಗಿದ್ದರು. ಪ್ರಥಮ ಭಾಗದಲ್ಲಿ ವಿಂಡ್ಸರ್ ಡ್ಯೂಕರು ಸತೀ ಸಿಂಪ್ಸನಗಳನ್ನು ಕಂಡು ಮಾತಾಡಿದ ಸ್ವಾರಸ್ಯಮಯ ಘಟನೆಯು ವಿವರಿಸಲ್ಪಟ್ಟಿದೆ.

□ □ □

ಎರಡನೆ ಭಾಗದಲ್ಲಿ:—ಜೂನ್ ೧೦, ೧೯೩೧. ಎಡ್ವಾರ್ಡ್ ಪ್ರಿನ್ಸ್ ಆಫ್ ವೇಲ್ಸರವರು ತಮ್ಮ ಆಳ್ವಿಕೆಯ ೨೦ನೆಯ ವಾರ್ಷಿಕೋತ್ಸವವನ್ನು ಆಚರಿಸುತ್ತಾರೆ. ಅದೇ ಸಂದರ್ಭದಲ್ಲಿ ಅವರು ಸತೀ ಅರ್ನೆಸ್ಟ್ ಸಿಂಪ್ಸನ್ ಎಂಬ ಸುಂದರಿಯನ್ನು ಕಾಣುತ್ತಾರೆ. ಈ ಭಾಗದಲ್ಲಿ ಹಿಂದೆಂದೂ ಹೇಳಲಾಗದ ಅದ್ಭುತರಮ್ಯ ಪ್ರೇಮ ಕಥೆಯು ಬರೆಯಲ್ಪಟ್ಟಿದೆ. ಓರ್ವ ಸ್ತ್ರೀಯಿಂದಾಗಿ ಸಾಮ್ರಾಜ್ಯದ ಚಕ್ರವರ್ತಿಗಳು ತನ್ನ ಮನೋಗತಿಯಂತೆಯೇ ಸಾಮ್ರಾಜ್ಯದ ಚರಿತ್ರೆಯನ್ನೂ ಹೇಗೆ ಬದಬದಲಾಯಿಸಿದರೆಂಬುದನ್ನು ಈ ಭಾಗದಲ್ಲೋದುವಿರಿ.

□ □ □

ಎಂಟನೆಯ ಎಡ್ವಾರ್ಡರು ಸತೀ ಸಿಂಪ್ಸನಳೊಡನಿರುವ ಮೈತ್ರಿಯನ್ನು ಬಿಟ್ಟು ಬಿಡುವರೇ ಎಂಬ ವಿವಾದಾಸ್ಪದ ವಿಚಾರವು ಈ ಭಾಗದಲ್ಲಿ ಚರ್ಚಿಸಲ್ಪಟ್ಟಿದೆ. ಯುರೋಪಿನ ಎಲ್ಲಾ ರಾಷ್ಟ್ರಗಳ ಗುಪ್ತ ಪೋಲೀಸರು ವಿಂಡ್ಸರ್ ನಾಟಕದ ರಂಗಭೂಮಿಗೆ ಬರುತ್ತಾರೆ. ರಹಸ್ಯದ ನುಡಿಗಳು ದಿನ ಹೋದಂತೆ ಹೆಚ್ಚುತ್ತವೆ. ಜನರಾಡುವ ಮಾತು ಧರ್ಮದ ಅಧಿಕಾರ ಸ್ಥಾನವಾದ ಇಗರ್ಜಿಯೆಡೆಗೂ ಹಬ್ಬುತ್ತದೆ. ಈ ವಿಭಾಗದಲ್ಲಿ ನಿಗೂಢ ಆಕಾಶವಾಣಿ ಮತ್ತು ಸಮಸ್ತ ಸಾಮ್ರಾಜ್ಯದ ಶಾಂತಿಯನ್ನೇ ನಾಶಗೊಳಿಸುತ್ತಿದ್ದ ಮಹತ್ವದ ಘಟನೆಯೊಂದನ್ನು ವಿವರಿಸಲಾಗಿದೆ.

□ □ □

ಆ ಬಳಿಕ ಪ್ರಾರಂಭವಾಗುತ್ತದೆ ತರುಣ ಚಕ್ರವರ್ತಿಗಳ ವಿಮರ್ಶೆ. ಲಜ್ಜಾವಹ ಕಥೆಗಳು ಸಾಮ್ರಾಜ್ಯದ ಧುರೀಣರಿಂದ ಹೇಳಲ್ಪಡುತ್ತವೆ. ಇದರ ಪರಾಕಾಷ್ಠೆಯಾಗಿ ಪ್ರಧಾನ ಮಂತ್ರಿ ಬಾಲ್ಡ್ವಿನ್ ಮತ್ತು ಎಂಟನೆಯ ಎಡ್ವರ್ಡರಿಗೆ ಭೇಟಿಯಾಗುತ್ತದೆ. ಅಮೇರಿಕದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಬರಹಗಳು ಸಮಸ್ತ ಜಗತ್ತನ್ನು ಆಶ್ಚರ್ಯಕ್ಕೀಡುಮಾಡುತ್ತವೆ.

□ □ □

ಕೊನೆಗೆ! ಕೊನೆಗೇನು? ಎಂಟನೆಯ ಎಡ್ವಾರ್ಡರ ಸಾಮ್ರಾಜ್ಯತ್ಯಾಗ, ಅವರ ವೈಯಕ್ತಿಕ ಜೀವನ, ಸರ್ವಾಧಿಕಾರಿಗಳೊಡನೆ ಮಾತುಕತೆ, ಐರೋಪ್ಯ ಸಂಚಾರ, ಸಿಂಪ್ಸನ್ ಎಡ್ವಾರ್ಡರ ಪ್ರಣಯಲೀಲೆ, ಅವರ ಮಹಾ ಅರಮನೆ, ವಿಹಾರ ಮೊದಲಾದ ಸಾವಿರಾರು ಸ್ವಾರಸ್ಯದ ಸಂಗತಿಗಳು! ಪ್ರಥಮ ಭಾಗವನ್ನು ಮುಂದಿನ ಸಂಚಿಕೆಯಲ್ಲೋದಿರಿ.

---




# ವಿದೇಶ ವಿಚಾರಗಳು

### ಚೀನದ ಸಮರವು.

ಅವ್ಯಾಹತವಾಗಿ ನಡೆಯುತ್ತಿದೆ. ಹ್ಯಾಂಕೋ ನಗರಾಭಿಮುಖವಾಗಿ ಮುನ್ನಡೆಯುತ್ತಿದ್ದ ಜಪಾನೀ ಸೈನ್ಯವು ಹಿಂದಟ್ಟಲ್ಪಟ್ಟಿದೆ. ಯಾಂಗ್ಟ್ಸೀ ನದಿಯ ಉತ್ತರ ಭಾಗದಲ್ಲಿ ಜಪಾನಿಯರಿಗೆ ಎಡೆಯಿಲ್ಲದಂತಾಗಿದೆ. ಪೀಪಿಂಗ್ ಮತ್ತು ಹ್ಯಾಂಕೋ ರೈಲ್ವೇ ಲೈನನ್ನು ಕಡಿದು ಹಾಕಲು ಜಪಾನಿಯರು ಎಷ್ಟು ಯತ್ನ ಮಾಡಿದರೂ ಅವರಿಂದ ಸಾಧ್ಯವಾಗಲಿಲ್ಲ. ಹ್ಯಾಂಕೋ ನಗರವನ್ನು ರಕ್ಷಣಾ ಸ್ಥಳವಾಗಿ ಮಾರ್ಪಡಿಸಬೇಕೆಂದು ಬ್ರಿಟಿಷ್ ಮತ್ತು ಫ್ರೆಂಚ್ ರಾಯಭಾರಿಗಳು ಇತ್ತಂಡದವರೊಡನೆ ಕೇಳಿಕೊಳ್ಳಲಾಗಿ ಜಪಾನಿಯರು ಈಗಾಗಲೆ ಅದಕ್ಕೆ ಸಮ್ಮತಿಯನ್ನಿತ್ತಿದ್ದಾರೆ. ಚೀನೀ ಸರಕಾರವು ಈ ಯೋಜನೆಯನ್ನು ಬಲವಾಗಿ ವಿರೋಧಿಸಿದೆ. ಚೀನದ ಪ್ರಚಾರಕ್ಕಾಗಿ ಚೀನೀಯರನ್ನೊಳಗೊಂಡ ಒಂದು ಮಂಡಲವು ಯುದ್ಧದ ಕರುಣಾಜನಕ ಚಲನ ಚಿತ್ರಗಳನ್ನು ಪ್ರದರ್ಶಿಸುವರೆ ಭಾರತಕ್ಕೆ ಬಂದಿದೆ. ಡಾ| ಮದನ ಮೋಹನ ಅಟಾಲರು ಈ ಮಂಡಲಿಗೆ ಯಶಸ್ಸನ್ನೂ ಬಯಸಿದ್ದಾರೆ.

○ ○ ○

### ಪ್ರಜಾಸತ್ತೆಯ ಹೆಸರಿನಲ್ಲಿ–

ಅಸಾಧ್ಯ ಅನ್ಯಾಯಗಳು ಐರೋಪ್ಯ ರಾಷ್ಟ್ರಗಳಿಂದ ಮಾಡಲ್ಪಡುತ್ತಿವೆ. ೧೯೧೪ರ ಪರಿಸ್ಥಿತಿಯು ಪುನಃ ಜಗತ್ತಿನೆದುರು ಎದ್ದು ನಿಂತಿದೆ. ಜರ್ಮನಿ, ಫ್ರಾನ್ಸ್, ಇಟಲಿ, ಇಂಗ್ಲೆಂಡ್ ಮೊದಲಾದ ಎಲ್ಲಾ ರಾಷ್ಟ್ರಗಳು ಯುದ್ಧಕ್ಕಾಗಿ ಸಾಧ್ಯವಾದಷ್ಟು ಸೈನ್ಯ ಸರಂಜಾಮುಗಳನ್ನು ಹೆಚ್ಚಿಸುತ್ತಿವೆ. ಜರ್ಮನಿಯಲ್ಲಿ ಹಿಟ್ಲರ್ ಮತ್ತು ಕಂಪೆನಿಯವರು ಜೆಕೊಸ್ಲೊವೇಕಿಯವನ್ನು ಸಿಕ್ಕಾಬಟ್ಟೆ ಬೈದು ಭಂಗಿಸುತ್ತಿದ್ದಾರೆ.

○ ○ ○

### ಈ ಸಮಸ್ಯೆಯು

ಇಪ್ಪತ್ತು ವರುಷಗಳ ಮೊದಲೇ ತಲೆದೋರಲ್ಪಟ್ಟಿತು. ಝೆಕ್‌ರಿಪಬ್ಲಿಕಿನೊಳಗೆ ೩,೫೦೦,೦೦೦ ಮಂದಿ ಜರ್ಮನರನ್ನು ಲಾಯಡ್ ಜಾರ್ಜ್, ಫ್ರೆಂಚ್ ರಾಜಕೀಯ ಮುತ್ಸದ್ದಿ ಕ್ಲೆಮೆಂಕೋರವರು ಸೇರಿಸಿ ಈ ಉಪದ್ರವನ್ನುಂಟುಮಾಡಿರುವರು. ಸುಡೇಟನ್ ಪ್ರಾಂತ್ಯವನ್ನು ಮೊದಲೇ ಆಸ್ಟ್ರಿಯ ಅಥವಾ ಜರ್ಮನಿಗೆ ಸೇರಿಸುತ್ತಿದ್ದರೆ ಇಂದಿನ ಗೊಂದಲವು ಸುಲಭದಲ್ಲಿ ತಲೆಯೆತ್ತುತ್ತಿದ್ದಿಲ್ಲ. ಸುಡೇಟನ್ ಪ್ರಾಂತ್ಯದ ಪರ್ವತಾವಳಿಗಳು ಜರ್ಮನಿಯಿಂದ ಫ್ರಾನ್ಸನ್ನು ದೂರ ಮಾಡುವುದಲ್ಲದೆ, ಜೆಕೊಸ್ಲೊವೇಕಿಯದಲ್ಲಿ ತಯಾರಾಗುವ ಯುದ್ಧ ಸಾಧನಗಳು ಫ್ರಾನ್ಸಿಗೆ ಬೇಕಾದುವು. ಪ್ಯಾರಿಸ್ ಒಪ್ಪಂದದಿಂದುಂಟಾದ ಈ ಉಪಕಾರವು ಜೆಕೊಸ್ಲೊವೇಕಿಯದ ಪಾಲಿಗೆ ಅಪಕಾರವಾಗಿ ಪರಿಣಮಿಸಿತು.

○ ○ ○

### ಜೆಕೊಸ್ಲೊವೇಕಿಯದ ಮಹತ್ವ.

ಜೆಕೊಸ್ಲೊವೇಕಿಯದಲ್ಲಿ ಗೊಂದಲಕ್ಕೆ ಮೂಲ ಕಾರಣವು ಅಲ್ಲಿಯ ಅಲ್ಪಸಂಖ್ಯಾತರಿಂದಾಯಿತೆಂದು ಭಾವಿಸುವುದು ಶುದ್ಧ ತಪ್ಪು. ಆ ಪ್ರಜಾಸತ್ತಾತ್ಮಕ ರಾಷ್ಟ್ರದಲ್ಲಿರುವ ಬೆಲೆಬಾಳುವ ಯುದ್ಧ ಸಾಧನಗಳ ಫ್ಯಾಕ್ಟರಿ, ಅಲ್ಲಿಯ ಸಂಪತ್ತು ಮೊದಲಾದುವುಗಳು ಜರ್ಮನಿಗೆ ಬೇಕಾಗಿವೆ. ಜನಾಂಗ ಸಭೆಯು ಸ್ವಲ್ಪ ಜೀವಂತವಾಗಿದ್ದಾಗ ಅದು ಪ್ಯಾರಿಸ್ ಒಪ್ಪಂದದಲ್ಲಿ ಅವಶ್ಯವುಳ್ಳ ಬದಲಾವಣೆಗಳನ್ನು ಮಾಡುವ ಗೊಡವೆಗೆ ಹೋಗಲಿಲ್ಲ.

○ ○ ○

### ಹಿಟ್ಲರನ ಅಸಂತೋಷಕ್ಕೆ

ಮೂಲ ಕಾರಣವೆಂದರೆ ಜೆಕೊಸ್ಲೊವೇಕಿಯದಲ್ಲಿರುವ ಪರ್ವತಾವಳಿ. ಸುಡೇಟನ್ ಪ್ರಾಂತ್ಯದ ಆ ಪರ್ವತ ರಾಶಿಗಳಿಂದಾಗಿ ರುಮೇನಿಯದ ಎಣ್ಣೆ ಗಣಿಗಳನ್ನು ಕೈವಶಪಡಿಸಿಕೊಳ್ಳಲು ಮುನ್ನಡೆಯುವುದು ಅಸಾಧ್ಯವಾಗಿದೆ. ರಷ್ಯದ ಉಕ್ರೇನಿನ ಕಪ್ಪು ಮಣ್ಣನ್ನು ಪಡೆಯುವದು ಅಸಾಧ್ಯವಾಗಿದೆ. ಹಿಟ್ಲರನು ನ್ಯೂರೆಂಬರ್ಗಿನಲ್ಲಿ ಈ ರಹಸ್ಯಗಳನ್ನು ಹೇಳಲಿಲ್ಲ. ಈಗಾಗಲೆ ಜೆಕ್ ಸರಕಾರವು ಜೆಕೊಸ್ಲೊವೇಕಿಯವನ್ನು ಹಲವು ವಿಭಾಗಗಳನ್ನಾಗಿ ಮಾಡಿ ಪ್ರತಿಯೊಂದು ವಿಭಾಗಕ್ಕೆ ಸ್ವಾತಂತ್ರ್ಯವನ್ನು ಕೊಡಲಿದ್ದಾರೆ. ಬ್ರಿಟಿಷ್ ಮತ್ತು ರಷ್ಯನರು ಜೆಕೊಸ್ಲೊವೇಕಿಯವನ್ನು ಸಮರ್ಥಿಸುವುದಿದ್ದರೆ ಅದು ಫ್ರಾನ್ಸಿಗಾಗಿ.

○ ○ ○

### ಹೊಣೆಗಾರರಾರು?

ಜೆಕೊಸ್ಲೊವೇಕಿಯದ ಇಂದಿನ ಗೊಂದಲಕ್ಕೆ ಮೂಲಕಾರಣರೆಂದು

ಬ್ರಿಟಷರು. ೧೯೩೩ರಿಂದ ಬ್ರಿಟಿಷ್ ಸರಕಾರವು ಆರಿಸಿಕೊಂಡು ಬಂದ ವಿಧಾನದಿಂದಾಗಿ ಜೆಕ್‌ಸರಕಾರವು ಹಿಟ್ಲರನ ಉಪಟಳಕ್ಕೆ ತಲೆತಗ್ಗಿಸ ಬೇಕಾಯಿತು. ಜರ್ಮನಿಯು ಬಲಶೂನ್ಯವಾದಾಗ ಬ್ರಿಟಷರು ಅವರನ್ನು ಸಿಕ್ಕಾಬಟ್ಟೆ ಶಿಕ್ಷಿಸಿದರು. ಹೆರ್ ಹಿಟ್ಲರನು ಇಂದು ಪ್ರಭಾವ ಶಾಲಿಯಾಗಿರುವುದರಿಂದ ಚೇಂಬರ್ಲೆನ್ ಮಂತ್ರಿಮಂಡಲವು ಅವನು ಹಾಡಿದಂತೆ ಕುಣಿದು, ಜನಾಂಗ ಸಭೆಯನ್ನು ಮಣ್ಣುಪಾಲುಮಾಡಿ ಇಂದು ಕೂಡಾ ತನ್ನ ತಪ್ಪನ್ನು ಸರಿಪಡಿಸಿಕೊಳ್ಳದೆ ಸೊವಿಯಟ್ ರಷ್ಯವು ಕೈನೀಡಿ ಕೊಡುವ ಬೆಂಬಲವನ್ನು ಸ್ವೀಕರಿಸುವುದಿಲ್ಲ.

○ ○ ○

## ಸ್ಪೈನಿನ ಪರಿಸ್ಥಿತಿ.

ಯುರೋಪಿನ ಎಲಾ ರಾಷ್ಟ್ರಗಳ ದೃಷ್ಟಿಯು ಮಧ್ಯಯುರೋಪಿನೆಡೆಗೆ ಹರಿದಿರುವುದರಿಂದ ಸ್ಪೈನ್ ಭೂಶಿರದಲ್ಲಿ ನಡೆಯುತ್ತಿರುವ ಯುದ್ಧವು ತತ್ಕಾಲಕ್ಕೆ ಮೂಲೆಪಾಲು ಮಾಡಲ್ಪಟ್ಟಿದೆ. ಮುಸ್ಸೋಲಿನಿಯು ಸಾಧ್ಯವಾದಷ್ಟು ಸೈನ್ಯವನ್ನೂ ಯುದ್ಧಸಾಧನಗಳನ್ನೂ ಜನರಲ್ ಫ್ರೇಂಕನಿಗೆ ಕಳುಹಿಸುತ್ತಿದ್ದಾನೆ. ಫ್ರೆಂಚರು ಬ್ರಿಟಿಷ್ ಮಂತ್ರಿಮಂಡಲದ ಸಮಾಧಾನಕ್ಕಾಗಿ ತಮ್ಮ ಗಡಿನಾಡನ್ನು ಮುಚ್ಚಿ ಯಾವತ್ತು ಬೆಂಬಲವು ಸ್ಪೈನ್ ಸರಕಾರಕ್ಕೆ ಸಿಗದಂತೆ ಮಾಡಿದ್ದಾರೆ. ಜನರಲ್ ಫ್ರೇಂಕೋ ಬ್ರಿಟಿಷ್ ಯೋಜನೆಯನ್ನು ಸಂಪೂರ್ಣವಾಗಿ ತಿರಸ್ಕರಿಸಿ ವಿದೇಶೀ ಸೈನಿಕರನ್ನು ಸ್ಪೈನಿನಿಂದ ಹೊರಗಟ್ಟುವ ವಿಚಾರವನ್ನು ಕಡೆಗಣಿಸಿದ್ದಾನೆ. ಬ್ರಿಟಿಷ್ ಸರಕಾರವು ಈ ಕುರಿತು ಎಂದಿನಂತೆ ನಿಷೇಧವನ್ನು ವ್ಯಕ್ತಪಡಿಸಿ ಲಜ್ಜಾವಹವಾದ ತಾಟಸ್ಥ್ಯ ಧೋರಣೆಯ ಪ್ರಹಸನದಲ್ಲಿ ಭಾಗವಹಿಸುತ್ತಿದೆ.

○ ○ ○

## ಮುಸ್ಸೋಲಿನಿಯ ಯತ್ನ.

ಮಧ್ಯಯುರೋಪಿನಲ್ಲಾಗುವ ಗೊಂದಲವನ್ನು ಕಂಡು ಸೀನರ್ ಮುಸ್ಸೋಲಿನಿಯು ಸ್ಪೈನನ್ನು ಸಂಪೂರ್ಣವಾಗಿ ಕೈವಶಪಡಿಸುತ್ತಿದ್ದಾನೆ. ಬ್ರಿಟಿಷ್ ಸರಕಾರವು ಯುದ್ಧಮಾಡುವುದಿದ್ದರೆ ಅದು ಫ್ಯಾಸಿಸ್ಟ್ ಶಕ್ತಿಯ ನಿಗ್ರಹಕ್ಕಲ್ಲ, ಫ್ರೆಂಚರ ಮನಶ್ಶಾಂತಿಗಾಗಿ! ಜೆಕೊಸ್ಲೊವೇಕಿಯದ ಸ್ವಾತಂತ್ರ್ಯರಕ್ಷಣೆಯೂ ಅದಕ್ಕಾಗಿಯೆ. ಜೆಕೊಸ್ಲೊವೇಕಿಯವನ್ನು ಒಂದೆಡೆಯಲ್ಲಿ ರಕ್ಷಿಸುವಾಗ ಬ್ರಿಟನು ಇನ್ನೊಂದೆಡೆಯಲ್ಲಿ ಸ್ಪೈನನ್ನು ಮುಸ್ಸೋಲಿನಿಗೆ ಮಾರುತ್ತಿದೆ.

---

**= ಮುಖಪತ್ರದ ಚಿತ್ರ =**

ಈ ಸಂಚಿಕೆಯ ಮುಖಪತ್ರದಲ್ಲಿ ಹಾಕಿದ ಬುದ್ಧ ವಿಗ್ರಹದ ಅನಾವರಣ ಸಮಾರಂಭವು ಉಡುಪಿಯ ಶ್ರೀ ರಾಮಕೃಷ್ಣಾ ಥಿಯೇಟರಿನಲ್ಲಿ ಡಾ| ಕೆ. ವಿಟ್ಟಲ ಶೆಟ್ಟರವರಿಂದ ಕಳೆದ ತಾ. ೨೮ರಂದು ನೆರವೇರಿಸಲ್ಪಟ್ಟಿತು.

## ನವೀನ ಗಾದೆಗಳು.

ಇಂದು ಮಾಡಿ ಆದುದನ್ನು ನಾಳೆ ಮಾಡಬೇಡ.

. . . . .

ಸತ್ಯಕ್ಕೆ ಬೆಲೆಯಿಲ್ಲ.

---

# ಛಾಯಾ ಲೋಕ

ಸಂಗ್ರಾಹಕರು: ಶ್ರೀ. ಹಯವದನರಾವ್

**= ಡೋಲಿಗೆ ಧಿಕ್ಕಾರ! =**

ಮೈಸೂರಿನ ಸಾಬು ಅಭಿನಯಿಸಿರುವ ಡೋಲು ಅಥವಾ "ದಿ ಡ್ರಮ್" ಎಂಬ ಬ್ರಿಟಿಷ್ ಚಲನ ಚಿತ್ರಕ್ಕೆ ಸಿಟಿ ಆಫ್ ವೆನಿಸ್ ಕಲಶವು ಬಹುಮಾನವಾಗಿ ಸಿಕ್ಕಿದೆ.

ಈ ಚಿತ್ರವು ಭಾರತದ ಗಡಿ ನಾಡಿನ ಕುರಿತು ಅಪಪ್ರಚಾರವನ್ನು ಮಾಡಲು ತಯಾರಿಸಿರುವುದಾಗಿದೆ. ಎಲ್ಲಾ ಭಾರತೀಯ ಥಿಯೇಟರಿನವರು ಈ ಚಿತ್ರವನ್ನು ಬಹಿಷ್ಕರಿಸಬೇಕೆಂದು ಮುಂಬಯಿಯ ಕಾಂಗ್ರೆಸ್ ಧುರೀಣರಲ್ಲೊಬ್ಬರಾದ ಸಯ್ಯದ್ ಅಬ್ದುಲ್ಲಾ ಬ್ರೆಲ್ವಿಯವರು ಬಿನ್ನವಿಸಿಕೊಂಡಿದ್ದಾರೆ. ಕಲಾದೃಷ್ಟಿಯಲ್ಲಿ ಇದು ಯಶಸ್ವಿಯಾಗಿರುವುದಿದ್ದರೂ ಭಾರತಕ್ಕೆ ಹಾನಿಕರವಾಗಿರುವುದರಿಂದ ಈ



"ಡಾಲ್ಸ್ ಆಫ್ ಕ್ಲೇ" ಎಂಬ ಚಿತ್ರದಲ್ಲಭಿನಯಿಸಿದ
**ಮಾಧುರಿ**

ಬ್ರಿಟಿಷ್ ಪ್ರಚಾರ ಚಿತ್ರವನ್ನು ಭಾರತೀಯರು ಬಹಿಷ್ಕರಿಸಬೇಕಾಗಿದೆ.

---

ಹನ್ಸ್ ಚಿತ್ರದವರ "ಬ್ರಹ್ಮಚಾರಿ" ಯೆಂಬ ಸಾಮಾಜಿಕ ಚಿತ್ರವು ಬ್ರಹ್ಮಚರ್ಯದ ವಿಡಂಬನಾತ್ಮಕ ವಿಮರ್ಶೆಯಾಗಿದೆ.

·X·

ಧರತಿ ಮಾತಾ ಎಂಬ ನ್ಯೂಥಿಯೇಟರ್ ಚಿತ್ರವು ಕಲಾದೃಷ್ಟಿಯಲ್ಲಿ ಸರ್ವಶ್ರೇಷ್ಠವಾಗಿದೆ.

·X·

ದೇವಿಕಾರಾಣಿ ಅಭಿನಯಿಸಿರುವ "ವಚನ"ವೆಂಬ ಬೋಂಬೇ ಟಾಕೀಸ್ ಚಿತ್ರವು ಮುಂಬಯಿಯಲ್ಲಿ ಹಲವು ವಾರಗಳಿಂದ ಪ್ರದರ್ಶಿಸಲ್ಪಡುತ್ತಿದೆ.

·X·

ಜನರಲ್ ಫಿಲ್ಮ್ಸನವರ ಬಾಘಬನ" ಎಂಬ ಚಿತ್ರವು ಮಿ| ಎ. ಆರ್. ಕರ್ದಾರರ ನಿರ್ದೇಶಕತ್ವದಿಂದಾಗಿ ಅತ್ಯಂತ ಯಶಸ್ವಿಯಾಗಿದೆ.

·X·

ವಿಷ್ಣು ಸಿನೆಟೋನಿನವರ "ಫೇಷನೇಬ್ಲ್ ವ್ಯಾಫ್" ಎಂಬ ಚಲನಚಿತ್ರವು ಮುಂಬಯಿಯಲ್ಲಿ ಪ್ರದರ್ಶಿಸಲ್ಪಡುತ್ತಿದೆ.

·X

ರಣಜಿತ್ ಕಂಪೆನಿಯ "ಫ಼ೋರಕ್ ಆಯಾ" ಮತ್ತು "ಬೆಕ್ಕು" ಎಂಬೆರಡು ಚಿತ್ರಗಳು ಪೂರ್ಣವಾಗಿವೆ.

·X·

ರುಬೀ ಪಿಕ್ಚರ್ಸಿನವರ "ಪ್ರೇಮ್ಕಿ ಜ್ಯೋತಿ" ಎಂಬ ಚಿತ್ರದಲ್ಲಿ ಬಿಲಿಮೋರಿಯ, ಸುಲೋಚನ, ಮತ್ತು ಜಾಲ್‌ಮರ್ಚೆಂಟ್ ಮೊದಲಾದವರು ಅಭಿನಯಿಸಿದ್ದಾರೆ.

—=*=—

# ಜಿಲ್ಲಾ ಸಂಚಾರಿಯ ಡೈರಿಯಿಂದ

### ಶಿಸ್ತು

ಜಿಲ್ಲಾ ಕಾಂಗ್ರೆಸ್ ಕಮಿಟಿಯು ಅದರ 'ಜನರಲ್ ಸೆಕ್ರೆಟರಿ'ಯರ ಮೇಲೆ ಸದ್ಯದಲ್ಲಿಯೇ ಶಿಸ್ತನ್ನು ಜಾರಿ ಮಾಡುವುದರಲ್ಲಿದೆ. ಸ್ವಲ್ಪ ಸಮಯದ ಹಿಂದೆ ಜಿಲ್ಲಾ ಬೋರ್ಡು ವಿದ್ಯಾ ಸಮಿತಿಗೆ ಶ್ರೀ. ಕೆ. ಕೆ. ಶೆಟ್ಟರು ಸದಸ್ಯರಾಗಿ ನಿಲ್ಲ ಬಯಸಿರುವುದು ಶಿಸ್ತಿನ ಜಾರಿಗೆ ಕಾರಣವೆಂದು ಹೇಳಲ್ಪಡುತ್ತದೆ. ಜಿಲ್ಲೆಯ ಕಾಂಗ್ರೆಸ್ ಧುರೀಣರು ತಮ್ಮೊಳಗೆ ಹೊಡೆದಾಟ ನಡೆಸುವುದರಿಂದ ಕಾಂಗ್ರೆಸ್ ಚಟುವಟಿಕೆಗಳಿಗೆ ಭಂಗವುಂಟಾಗಿರುವುದು ಶೋಚನೀಯವಾಗಿದೆ.

❖

### ಐಕ್ಯ.

ಮಂಗಳೂರಿನ ಶ್ರೀ. ಗೋಕರ್ಣನಾಥ ಕ್ಷೇತ್ರದ ಭಕ್ತವೃಂದದಲ್ಲಿ ಬಹು ಸಮಯದಿಂದ ನಡೆದುಕೊಂಡು ಬಂದಿದ್ದ ಅನೈಕ್ಯವು



ಮಂಗಳೂರಿನ ನಗರ ಸಭೆಯಲ್ಲಿ ಗಾಂಧಿಜಿಯವರ ಭಾವಚಿತ್ರ ಅನಾವರಣ ಮಾಡಿದ ಜಿಲ್ಲಾ ಬೋರ್ಡು ಅಧ್ಯಕ್ಷರಾದ
**ಡಾ. ಕೆ. ವಿಟ್ಠಲ ಶೆಟ್ಟರು.**

ಜಿಲ್ಲಾ ಕಲೆಕ್ಟರ್ ಮತ್ತು ಶ್ರೀ. ಕೆ. ಆರ್. ಕಾರಂತರೇ ಮೊದಲಾದವರ ಮಧ್ಯಸ್ಥಿಕೆಯಿಂದ ಹೋಗಲಾಡಿಸಲ್ಪಟ್ಟಿರುವುದು ಸ್ತುತ್ಯವಾಗಿದೆ.

❖

### ಅನಾವರಣ:

ಮಂಗಳೂರು ನಗರ ಸಭೆಯಲ್ಲಿ ಮಹಾತ್ಮಾಜಿಯವರ ಭಾವಚಿತ್ರ ಅನಾವರಣವನ್ನು ಜಿಲ್ಲಾ ಬೋರ್ಡಿನ ಅಧ್ಯಕ್ಷರಾದ ಡಾ. ವಿಟ್ಠಲ ಶೆಟ್ಟರು ಮಾಡಿದರು.

❖

### ರಾಜಿನಾಮೆ

ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯ ಅಧ್ಯಕ್ಷ ಶ್ರೀ. ಪಾಂಗಾಳ ಲಕ್ಷ್ಮೀನಾರಾಯಣ ನಾಯಕರು ತನ್ನ ಸ್ಥಾನಕ್ಕೆ ರಾಜಿ ಕೊಟ್ಟಿರುವರೆಂದು ತಿಳಿಸುತ್ತಾರೆ.

---



# ಎರಡೂ ಒಂದೇ!



ಲೇಖಕರು:
ಶ್ರೀ. ಎನ್. ಚಂದ್ರರಾಜೇಂದ್ರ, ವಿಶಾರದ, ಧರ್ಮಸ್ಥಳ

ನಮ್ಮ ನಾಣುವೂ ಸ್ವಲ್ಪ ರಸಿಕನೇ! ಅಂದರೆ ಪೇಟೆಗಾಳಿಯು ತಾಗಿದ್ದರಿಂದ! ಅಲ್ಲದೆ ನಾಟಕವೆಂದರೆ ಬಹು ಇಷ್ಟ. ತಾನು ವಾಸಮಾಡತಕ್ಕ ಹಳ್ಳಿಯಿಂದ ಎರಡು ಮೈಲುಗಳ ದೂರದಲ್ಲಿ ಹರಿಪುರವಿತ್ತು. ಹರಿಪುರವು ಚಿಕ್ಕದೊಂದು ಪಟ್ಟಣ. ಅಲ್ಲಿಯ ಶಂಕ್ರಪ್ಪನವರ ಮಗಳು ನಾಗಮ್ಮನು ನಾಣುವಿನ ಧರ್ಮಪತ್ನಿ. ಹೇಗೂ ನಾಗಮ್ಮನು ಪೇಟೆಯವಳೆಂದ ಮೇಲೆ ಈಗಿನ ಫ್ಯಾಶನಿನವಳೆಂದರೆ ಹೆಚ್ಚಾಗದು. ನಾಣುವು ಆಗಾಗ್ಯೆ ತನ್ನ ಊರಿಂದ ಇಲ್ಲಿಗೆ ಬಂದು ತನ್ನ ಹೆಂಡತಿಯ ಮನೆಯಲ್ಲಿ ಎಂಟು ಹತ್ತು ದಿವಸಗಳಿದ್ದು ಪ್ರತಿದಿನ ರಾತ್ರಿ ತಪ್ಪದೆ ನಾಟಕಕ್ಕೆ ಹೋಗುತ್ತಿದ್ದನು. ತನ್ನ ಹೆಂಡತಿ ಆಗಾಗ ತಾನೂ ನಾಟಕ ನೋಡುವುದಕ್ಕಾಗಿ ಬರುತ್ತೇನೆಂದು ಹಟಮಾಡುತ್ತಿದ್ದಳು. ನಾಣುವು ನಿರ್ವಾಹವಿಲ್ಲದೆ ತನ್ನ ಪ್ರಿಯಯನ್ನು ಕರೆದುಕೊಂಡು ಹೋಗುತ್ತಿದ್ದನು. ನಾಗಮ್ಮನು ಲಾವಣಿ, ಪದ್ಯ ಮುಂತಾದ್ದನ್ನು ಹಾಡುವುದರಲ್ಲಿ ನಿಪುಣಳು. ನಾಟಕದಲ್ಲಿ ಹಾಡುತ್ತಿದ್ದ ಕೆಲವು ಹಾಡುಗಳನ್ನು ಹಾಡುತ್ತಿದ್ದಳು. ಹಾಡು ಕೇಳಲು ಬಹಳ ಇಂಪಾಗಿರುತ್ತಿತ್ತು. ನಟೀಮಣಿಯರ ನಟನೆಯನ್ನು ನೋಡಿ ತಾನೂ ನಟಿಯಾಗುತ್ತಿದ್ದರೆ ಚೆನ್ನಾಗಿತ್ತೆಂದು ಒಮ್ಮೊಮ್ಮೆ ಭಾವಿಸುತ್ತಿದ್ದಳು.

× × × × ×

ನಾಣುವು ಬೆಳಿಗ್ಯೆ ಎಂಟೂವರೆ ಗಂಟೆಗೆ ಕಾಫಿ ಕುಡಿದು ಕುಳಿತಿದ್ದ. ಆಗಲೇ ಬಂತು ನಾಗಮ್ಮನ ತವಾಂ! ಬರುತ್ತಾ "ರಾಧಾಕೃಷ್ಣ ನಾಟಕಮಂಡಳಿ ಬಂದಿದೆಯಂತೆ. ನೀವು ಹೋಗುವುದಿಲ್ಲವೇನು?" ಎಂದಳು. ನಾಣು:– "ನಾನೂ ಬರುವೆನೆಂದೇ ಹೇಳಬಾರದೇ?" ನಾಗಮ್ಮ:"-ಅದೂ ಹೇಳಬೇಕೇ?" ಎಂದಳು. ಅಂದು ರಾತ್ರಿ ಒಂಭತ್ತು ಗಂಟೆಗೆ ನಾಣುವು ರೂಮಿನಲ್ಲಿ ಕುಳಿತುಕೊಂಡು "ನಾಗೂ! ಒಂದುಕಪ್ಪು ಕಾಫಿ ತಾರೇ!" ಎಂದನು. ಇಷ್ಟರಲ್ಲೇ ಇಡ್ಲಿಸಮೇತ ಕಾಫಿ ಬಂದಿತ್ತು. ಕಾಫಿ ಕೈಯಲ್ಲಿ ಹಿಡಿದುಕೋಡ್ಡೇ "ಇನ್ನು ನಾಟಕಕ್ಕೆ ಅರ್ಧಗಂಟೇನೇ ಇರೋದು ಹೋಗಬೇಡವೇ?" ಎಂದಳು. ನಾಣುವು "ಆಗಲಪ್ಪಾ ಹೋಗೋಣ. ಮೊದಲು ಕಾಫಿ ಇಲ್ಲಿಕೊಡು!" ಎಂದನು. ಕಾಫಿ ಕುಡಿದಾಯಿತು. ನಾಗಮ್ಮನು ಮೊದಲೇ ಸಿಂಗರಿಸಿಕೊಂಡು ನಾಟಕಕ್ಕೆ ಹೊರಟಿದ್ದಳು. ಇನ್ನೇನು ಇಬ್ಬರೂ ಹೊರಟರು. ಆದಷ್ಟು ವೇಗವಾಗಿ ನಡೆಯುತ್ತಾ ಥಿಯೇಟರ್ ಬಳಿ ಹೋಗುತ್ತಲೇ ಸೆಕೆಂಡ್ ಬೆಲ್ ಬಾರಿಸಿತು. ನಾಣುವು ಕೂಡ್ಲೇ ಫಸ್ಟ್ ಕ್ಲಾಸ್ ಟಿಕೇಟು ಎರಡನ್ನು ತೆಗೆದುಕೊಂಡು ಒಳಗೆ ಹೋಗುವಾಗಲೆ ಡ್ರಾಮಾ ಸುರುವಾಗಿತ್ತು. ಅಂದು "ರಾಮಾಭ್ಯುದಯ"ವು ಅತಿ ಚಲೋದಾಗಿತ್ತು. ಲಕ್ಷ್ಮಣನ ಪಾತ್ರಧಾರಿಯು ಬಹಳ ಚತುರನಿದ್ದನು. ಅಲ್ಲದೆ ಅತ್ಯಂತ ಸುಂದರ! ಅವನ ನಟನೆಯನ್ನು ನೋಡುತ್ತಿದ್ದಂತೆ ನಾಗಮ್ಮನು ಅವನಿಗೆ ಮರುಳಾದಳು! ಮನದೊಳಗೆ ಏನೇನೋ ಯೋಚಿಸಿದಳು! ಛೀ ಇದೇನು? ಅನ್ಯಪುರುಷರನ್ನು ಮನಸ್ಸಿನಲ್ಲಿ (ಕನಸಿನಲ್ಲಿ ಸಹಾ) ಬಯಸದ ಇವಳು ಹೀಗಾಗಲು ಕಾರಣವೇನೆನ್ನಬೇಡಿ! ಕಾಲಚಕ್ರದ ಗತಿಯೋ ಅಬಲೆಯ ಹೃದಯದುರ್ಬಲತೆಯೋ ಹೇತುವೆನ್ನಿ. ಅಲ್ಲದೆ ದುರ್ಗುಣಗಳು ಜಾಗ್ರತೆಯಾಗಿ ಅಂಟಿಕೊಳ್ಳುವುವು ಎಂಬುದು ಎಲ್ಲರೂ ತಿಳಿದಿರುವ ವಿಷಯವೇ. ನಾಗಮ್ಮನ ಮನವು ಚಂಚಲವಾಯಿತು. ಈ ಮಧ್ಯೆ ನಾಟಕವೇ ಅವಳಿಗೆ ರುಚಿಸದು. ಈ ವಿಷಯವನ್ನು ನಾಣುವು ತಿಳಿಯಲಾರ. ಅವನು ದೃಶ್ಯವನ್ನು ನೋಡುತ್ತಿದ್ದನೋ ಅಥವಾ ಬೇರೆ ಭಾವನೆಯಲ್ಲಿದ್ದನೋ ನಮಗೆ ತಿಳಿಯದು. ಅಂತೂ ನಾಟಕವು ಮುಗಿಯಿತು. ಹಿಂದೆ ಬರುವಾಗ ಮಾರ್ಗದಲ್ಲಿ ನಾಗಮ್ಮನು "ಡ್ರಾಮಾ ಚೆನ್ನಾಗಿತ್ತಲ್ಲವೇ" ಎಂದಳು. ನಾಣುವು "ಚಲೋದಾಗಿತ್ತೆಂದು ಹೇಳಬೇಕೇ!" ಎಂದನು. ನಾಗಮ್ಮನ ಮನದಲ್ಲಿ ಲಕ್ಷ್ಮಣನ ಪಾತ್ರಧಾರಿಯು ನೆಲಸಿದ್ದನು. ಅವನನ್ನು ಹೇಗೆ ಹೊಂದಲೆಂದು ಸದಾ ಯೋಚಿಸುತ್ತ ಹಂಚಿಕೆಯನ್ನು ಹುಡುಕುತ್ತಿದ್ದಳು.

× × × × ×

ರೂಮಿನೊಳಗೆ ಒರಗುವ ಕುರ್ಚಿಯ ಮೇಲೆ ಯುವಕನು ಕುಳಿತು ಸಿಗರೇಟಿನ ಹೊಗೆಯನ್ನುಗುಳುತ್ತಿದ್ದನು. ಜಾನಕಿಯು ಹೇಳಿದಳು:-ನಮ್ಮ ನಾಟಕದ ಮ್ಯಾನೇಜರರು

ಈ ಬಿಡಾರದಿಂದ ಎರಡು ಫರ್ಲಾಂಗ್ ದೂರವಿರುವ ಹೋಟೇಲಿಗೆ ಊಟಕ್ಕೆ ಹೋಗಿರುವರು. ನಾವಿಬ್ಬರೂ ಪ್ರತ್ಯೇಕವಾಗಿ ಈ ಬಿಡಾರವನ್ನು ಮಾಡಿಕೊಂಡಿದ್ದೇವೆ. ಅವರು ಆರುಘಂಟೆಗೆ ಬರಬಹುದೆಂದಳು. ಯುವಕನ ಮುಖವು ಪ್ರಫುಲ್ಲವಾಯಿತು. ಅತ್ಯಾನಂದಿತನಾಗಿ ಹೇಳಿದನು:- "ಪ್ರಿಯೇ ಜಾನಕಿ! ನಾನು ನಿನ್ನ ಪ್ರೇಮವನ್ನಾಶಿಸಿ ಬಂದಿರುವೆನು. ನಿನ್ನನ್ನು ಮೊನ್ನೆ ನಾಟಕದಲ್ಲಿ ನೋಡಿದಂದಿನಿಂದ ನಿನ್ನಲ್ಲೇ ಮನವು ನೆಟ್ಟಿದೆ. ನನ್ನ ಮಾತನ್ನು ನಿರಾಕರಿಸಬೇಡ. ದಯ ದೋರು!" ಜಾನಕಿಯಂತೂ ನಾಟಕದವಳು. ಅದರಲ್ಲೂ ವೇಶ್ಯಾಂಗನೆ! ಕೇಳ ಬೇಕೆ? ಅವಳ ಮುಖಭಾವದಿಂದಲೇ ಮನವನ್ನರಿತು ಅವಳ ಸನಿಹಕ್ಕೆ ಸರಿದು ಬಿಗಿದಪ್ಪಿದನು. ಅಪ್ಪಿನ ಬಿಗಿಯಿಂದ ಸಮಯವೆಷ್ಟು ಕಳೆಯಿತೋ ತಿಳಿಯದು. ಆದರೆ ಹೊರಗಿಂದ ಹೆಂಗುಸೊಬ್ಬಳು ಬಂದು "ಜಾನಕಮ್ಮನವರೆ! ತಗೊಳ್ಳಿ ಹಾಲು" ಎಂದು ಕೂಗಿದಳು. ಆಗ ಎಚ್ಚರವಾಯಿತು ಇವರಿಗೆ! ಹೆಂಗುಸು ನಾಣುವನ್ನು ನೋಡಲಿಲ್ಲವೆನ್ನಬಾರದು;ನೋಡಿಯೇ ನೋಡಿದಳು.

× × × × ×

ಮನೆಯ ಮುಂದುಗಡೆ ಜಗಲಿಯ ಮೇಲೆ ಯುವತಿಯೊಬ್ಬಳು ಕುಳಿತುಕೊಂಡು ಯೋಚಿಸುತ್ತಿದ್ದಳು. ನೋಡುತ್ತಿದ್ದಂತೆ ೨೫ವರ್ಷದ ತರುಣನು ಮನೆಯೊಳಗೆ ಪ್ರವೇಶಿಸಲು ಯುವತಿಯು ಒಳಗೆ ಕರೆದುಕೊಂಡುಹೋಗಿ ಕುರ್ಚಿಯನ್ನು ತೋರಿದಳು. ಯುವಕನು ಕುರ್ಚಿಯಲ್ಲಿ ಕುಳಿತನು. ಯುವತಿಯು ಕಾಫಿಯನ್ನು ತಂದು ಮೇಜಿನ ಮೇಲಿಟ್ಟಳು. ಯುವಕನು ಕಾಫಿ ಕುಡಿಯುತ್ತಾ "ನಿಮ್ಮ ಈ ಉಪಚಾರಕ್ಕಾಗಿ ಚಿರಋಣಿಯಾಗಿದ್ದೇನೆ. ನನ್ನನ್ನು ಯಾಕೆ ಬರಹೇಳಿದಿರಿ" ಎಂದನು. ತರುಣಿಯು ಪ್ರೇಮದೃಷ್ಟಿಯನ್ನು ಬೀರುತ್ತಾ "ಹಾಗಾದರೆ ಈ ಉಪಚಾರಕ್ಕೆ ಪ್ರತ್ಯುಪಕಾರವಾಗಬೇಕಾಗಿದೆ" ಎಂದಳು. ಯುವಕ "ಏನದು" ಎಂದನು. ಯುವತಿಯು "ಪ್ರಿಯಕರ! ರಾಮಾಭ್ಯುದಯ ನಾಟಕದಲ್ಲಿ ಲಕ್ಷ್ಮಣನ ಪಾತ್ರಧಾರಿಯಾಗಿದ್ದ ನಿಮ್ಮನ್ನು ನೋಡಿದ ಮೇಲೆ ನನ್ನ ಮನಸ್ಸಿಗೆ ಶಾಂತಿ ಇಲ್ಲ! ತಮ್ಮ ಪ್ರೀತಿಯನ್ನು ಬಯಸಿ ಇಲ್ಲಿಗೆ ನಿಮ್ಮನ್ನು ಕರೆಸಿದೆನು. ನನ್ನ ಇಚ್ಛೆಯನ್ನು ಪೂರೈಸಬೇಕಾಗಿ ಶಿರಗೊಡ್ಡಿ ಬೇಡುವೆನು" ಎಂದು ಬಾಗಿಲು ಮುಚ್ಚಿ ಅಗಣಿ ಹಾಕಿದಳು. ಆಮೇಲೆ .............. ..............ಆಗಲೇ ನಾಗೂ! ನಾಗೂ! ಎಂದು ಬಾಗಿಲು ತಟ್ಟಿದ ಶಬ್ದ! ನಾಗಮ್ಮನು ಬೆದರಿದಳು! ಆದರೂ ಯುವಕನನ್ನು ಧೈರ್ಯವಾಗಿರಲು ಹೇಳಿ ಬಾಗಿಲು ತೆರೆದಳು. ನೋಡುವಾಗ ಒಳಗೆ ಯುವಕನು ಕುಳಿತುಕೊಂಡಿರುವನು. ನಾಗಮ್ಮನು ಯುವಕನನ್ನು ಕುರಿತು:–"ನೀವು ಹೇಳಿಕೊಟ್ಟ ಹಾಡುಗಳನ್ನು ಕಲಿತು ನಾಳೆ ಹೇಳುವೆನು" ಎಂದಳು. ಯುವಕನು ಆಗಬಹುದೆಂದು ಹೊರಟೇ ಹೋದನು. ನಾಣುವು ಸಿಟ್ಟಿನಿಂದ "ಇದೇನೇ! ಅವನ್ಯಾಕೆ ಇಲ್ಲಿ? ಎಂದನು. 'ಹಾಡು ಕಲಿಯುವುದಕ್ಕಾಗಿ ಅವನನ್ನು ಕರೆಸಿದ್ದೆ' ಎಂದಳು ನಾಗು! ನಾಣು:- 'ಛೀ ವ್ಯಭಿಚಾರಿಣಿ! ಸಟೆಯಾಡುವೆಯಾ? ನಾಗಮ್ಮ:- "ಸಟೆಯಲ್ಲದಿದ್ದರೆ ಸತ್ಯವೇ ಯಾಕೆ ಆಗಲೊಲ್ಲದು? ಮೊನ್ನೆ ನೀವು ಜಾನಕಿಯ ಬಿಡಾರದಲ್ಲಿದ್ದಿರಂತೆ. ನಮ್ಮ ಮನೆಗೆಲಸದವಳು ಹೇಳಿದ್ದು! ನೀವೇನು ಮತ್ತೆ?" ಎಂದಳು. ನಾಣುವಿನ ಮುಖವನ್ನಾಗ ನೋಡಬೇಕಿತ್ತು!

---

# ಹಾರ್ಟ್ ಫೈಲಿಯರ್

ನಾಟಕಕಾರರು: ಪಂ. ಎಸ್. ಎ. ಆಚಾರ್.

## ದೃಶ್ಯ ೩

(ಕಳೆದ ಸಂಚಿಕೆಯಿಂದ ಮುಂದರಿದುದು.)

(ನ್ಯಾಯಸ್ಥಾನದ ದೃಶ್ಯ. ನ್ಯಾಯಾಧೀಶರು ಅಗ್ರಾಸನದಲ್ಲಿ ಮಂಡಿಸಿರುವರು. ಇದಿರಿನಲ್ಲಿ ಉರುಟು ಮೇಜಿನ ಸುತ್ತಲೂ ವಕೀಲರುಗಳು ಕುಳಿತಿರುವರು. ಪಿಂಜರಿಯಲ್ಲಿ ಮೋಹನನು ನಿಂತಿರುವನು. ಉಳಿದವರು ತಂತಮ್ಮ ಕೆಲಸಗಳನ್ನು ನಡೆಸುತ್ತಿರುವರು. ಶ್ರೀನಿವಾಸರಾಯರ (ವಕೀಲರಲ್ಲೊಬ್ಬರು) ಹಿಂಬದಿಯಲ್ಲಿ ಮಾಧವನು ನಿಂತಿರುವನು)

(ಸಾಂತಪ್ಪನು ಬಲು ಗಡಿಬಿಡಿಯಿಂದ ಪ್ರವೇಶಿಸಿ ತನ್ನ ವಕೀಲ ಕೇಶವ ಪೈಗಳ ಹಿಂದೆ ನಿಂತು ಅವರ ಬೆನ್ನನ್ನು ಮೆಲ್ಲನೆ ಒತ್ತುವನು.)

ಕೇಶ: (ಹಿಂತಿರುಗಿ) ಎಂತಹುದು?

ಸಾಂತ:—ಏನು ಹಣಗಿಣ ವಸೂಲಾಯಿತೆ?

ಕೇಶ:—ಸ್ವಲ್ಪ ನಿಲ್ಲಿ. ಗಡಿಬಿಡಿ ಮಾಡಬೇಡಿ ಇನ್ನೂ ವಿಚಾರಣೆ ಮುಗಿಯಲಿಲ್ಲ.

ಶ್ರೀನಿ:—(ಒಂದು ಅರ್ಜಿಯನ್ನು ಕೈಯಲ್ಲಿ ಹಿಡಿದು ನಿಂತುಕೊಂಡು) ಮಾನ್ಯ! ನ್ಯಾಯಾಧೀಶರೆ! ಸಾಂತಪ್ಪನವರ ಪ್ರತಿವಾದಿಗಳಾದ ಈ ಮೋಹನ ರಾಯರು, ಮೊನ್ನೆ ಇತ್ತೀಚೆಗೆ ಜಾರಿಗೆ ಬಂದಿರುವ ಮದ್ರಾಸು ವ್ಯವಸಾಯಗಾರರ ಸಾಲ ರಿಯಾಯತಿ ಆಕ್ಟಿನ ಪ್ರಕಾರ ವ್ಯವಸಾಯಗಾರರಲ್ಲಿ ಸೇರಿರುವರು. ಇವರಿಂದ ಸಾಂತಪ್ಪನವರಿಗೆ ಸಲ್ಲಬೇಕಾದ ಅಸಲು ಮೊಬಲಗು ರೂಪ್ಯಾ 500/- ಮಾತ್ರ. ಇದು 1925 ನೆಯ ಇಸವಿಯ ಸಾಲವಾಗಿದ್ದು ಇದರ ಬಡ್ಡಿಯು ಸ್ವಲ್ಪವೂ ಸಂದಾಯವಾಗದಿದ್ದುದರಿಂದ ಸದ್ರಿ ಆಕ್ಟಿನ ಪ್ರಕಾರ ಬಡ್ಡಿಯ ಹಣವು ಸಂಪೂರ್ಣ ಇವರಿಗೆ ಮಾಫಿಯಾಗಿರುವುದು.

(ನಡುವಿನಲ್ಲಿ.)

ಸಾ:—(ಕೇಶವ ಪೈಗಳನ್ನು ಕುರಿತು) ಇದೆಂತಹುದು ಸ್ವಾಮಿ! ಮೊನ್ನೆ ನೀವೆಂದಿರಲ್ಲಾ "ಕಾಂಗ್ರೆಸ್ ಸರಕಾರದವರು ಮಾಡಿದ್ದೆ"ಂದು. ಅದೆಯೇನು?

ಕೇ:—ಅಹುದು.

ಸಾಂ:—(ಶ್ರೀನಿವಾಸರಾಯರನ್ನುದ್ದೇಶಿಸಿ) ಸ್ವಾಮೀ! ಅದೆಲ್ಲ ಆಗದು. ಆ ಕಾಂಗ್ರೇಸು ಗೀಂಗ್ರೇಸು ಒಂದೂ ನನಗೆ ಬೇಡ. ನನಗೆ ಆ ಐನೂರು ರೂಪ್ಯಾಗಳನ್ನು ಸ್ವರಾಜ್ಯದವರೂ ಕೊಟ್ಟಿಲ್ಲ, ನೀವೂ ಕೊಟ್ಟಿಲ್ಲ. ಆ, ಹಾ, ಹಾ, ಬಡ್ಡಿ ಪೂರಾ ಮಾಫಿಯಂತೆ. ಅದೇನು ಸುಮ್ಮಗೆ ಬರುವುದೆ? ಎಷ್ಟು ದಿವಸ ಹೊಟ್ಟೆಗೆ ಒದ್ದೆ ಬಟ್ಟೆ ಕಟ್ಟಿ ಮಲಗಿದ್ದೇನೆ. ಅಷ್ಟು ಹಣವಾಗಬೇಕಾದರೆ? ಅದೆಂದೂ ಆಗಲಿಕ್ಕಿಲ್ಲ ತಿಳಿಯಿತೆ? (ನ್ಯಾಯಾಧೀಶರೂ ಶ್ರೀನಿವಾಸರಾಯರೂ ಕೆಂಗಣ್ಣಿನಿಂದ ಸಾಂತಪ್ಪನನ್ನು ನೋಡುವರು.)

ಕೇ:—(ಎದ್ದು ನಿಂತು) ಸಾಂತಪ್ಪನವರೇ! ಈಗ ನೀವೆಲ್ಲಿರುವಿರೆಂದು ತಿಳಿದಿರುವಿರಾ? ಇದು ನಿಮ್ಮ ಮನೆಯ ಅಂಗಳವಲ್ಲ. ನ್ಯಾಯ ಸ್ಥಾನ. ಕಾನೂನಿಗೆ ವಿರುದ್ಧವಾಗಿ ಮಾತನಾಡಿದರೆ ಕೈಗೆ ಸಂಕಲೆಯ ಕಟ್ಟು ಬಿದ್ದೀತು. ನೀವು ವೃದ್ಧರು, ವ್ಯವಹಾರವನ್ನರಿಯದವರು ಎಂದೊಮ್ಮೆ ನ್ಯಾಯಾಧೀಶರು ಮಾಫಿ ಮಾಡಬಹುದು. ಇನ್ನಾದರು ಸ್ವಲ್ಪ ಎಚ್ಚರವಿರಲಿ. ನಿಮಗೆ ಕೇಳಿದ ಸವಾಲಿಗೆ ಮಾತ್ರ ಉತ್ತರ ಕೊಡಿರಿ.

(ಸಾಂತಪ್ಪನು ಬೆರಗಾಗುವನು).

ಶ್ರೀನಿ:—(ಹಿಂದಿನ ಮಾತನ್ನೆ ಮುಂದರಿಸುತ್ತಾ) ಇವರ ಮೇಲೆ ಕೊಟ್ಟಿರುವ ಡಿಕ್ರಿಯನ್ನು ಅರ್ಜಿ ಕೊಟ್ಟು ದುರಸ್ತಿ ಪಡಿಸಲಿರುವರು. ಆದುದರಿಂದ ಪ್ರಕೃತದ ತನ್ನ ಮೇಲಿನ ವಾರಂಟನ್ನು ತೆಗೆದು ಹಾಕಿಸೋಣಾಗಬೇಕೆಂದು ಸನ್ನಿಧಾನಕ್ಕೆ ಈ ಅರ್ಜಿಯ ಮೂಲಕ ಅರಿಕೆ ಮಾಡಿ ಕೊಂಡಿರುವರು. (ಎಂದಂದು ಅರ್ಜಿಯನ್ನು ತೆಗೆದು ಮೇಜಿನ ಮೇಲಿಡುವರು.)

ನ್ಯಾಯಾಧೀಶ:—(ಆ ಅರ್ಜಿಯನ್ನು ಬಿಡಿಸಿ ಓದಿ) ಯಸ್ (Yes)

ಸಾಂ:—(ಕೇಶವ ಪೈಗಳನ್ನು ಕುರಿತು) ಅದೆಂಥದು ಸ್ವಾಮಿ ಅವರೆಂದುದು? 'ಹೇಸು'' ಅಂದರೇನು ಅವರು ಹೇಳಿದುದುಸರಿಯಲ್ಲವೆಂದೆ?

ಕೇಶವ:—"ಯಸ್'' ಎಂದರೆ ಹೇಳಿದ್ದೆಲ್ಲಾ ಸರಿಯೆಂದು.

ಸಾಂತ:—ಹಾಗಾದರೆ ಇನ್ನು ನನ್ನ ಗತಿ?

ಕೇಶವ:—ಬಡ್ಡಿಯ ಹಣ ಹೋಯಿತು. ಅಸಲಿಗೆ ತೊಂದರೆಯಿಲ್ಲ.

ಸಾಂತ:—ಬಡ್ಡಿ ಪೂರ್ಣ ಹೋಯಿತೆ?

ಕೇಶವ:—ಎಲ್ಲವೂ ಹೋದಂತೆಯೆ?

ಸಾಂ:—(ಕೈಗಳನ್ನೆದೆಯಲ್ಲಿಟ್ಟು) ಹೋ ( ಯಿ ತೆ? ಅಷ್ಟೂ ಹೋಯಿತೆ? ಅರ್ಧ ಸಹಸ್ರ ರೂಪಾಯಿಗಳೂ ಹೋದುವೇ? ಹಾ! ನನ್ನ ಹಣ.... ನನ್ನ ಹಣ (ಎನ್ನುತ್ತ ದೊಪ್ಪನೆ ಬೀಳುವನು. ಎಲ್ಲರೂ ಆಸನ ದಿಂದೆದ್ದು ಸಾಂತಪ್ಪನ ಬಳಿಗೆ ಹೋಗುವರು. ಮಾಧವ ಮೋಹನರು ಸಮೀಪ ಕುಳಿತು ಸಾಂತಪ್ಪನನ್ನು ನೋಡು ತ್ತಿರುವರು.)

ನ್ಯಾಯಾಧೀಶ:—(ದಫೇದಾರನನ್ನು ಕುರಿತು) ಹೇ ಬಾಬಣ್ಣ! ಬೇಗನೆ ಹೋಗಿ ಡಾಕ್ಟರರನ್ನು ಕರೆದು ಕೊಂಡು ಬಾ.

(ದಫೇದಾರನು ಹೋಗಿ ಕೂಡಲೆ ಡಾಕ್ಟರನನ್ನು ಕರೆದುಕೊಂಡು ಬರುವನು)

ನ್ಯಾ:—ಡಾಕ್ಟರ್! (ಸಾಂತಪ್ಪನನ್ನು ತೋರಿಸಿ) ಈ ಮನುಷ್ಯನಿಗೇನಾಯಿತೆಂದು ಪರೀಕ್ಷಿಸಿರಿ.

(ಡಾಕ್ಟರನು ಸಾಂತಪ್ಪನ ಸಮೀಪ ಸಾರಿ ಮೊಣ ಗಾಲಿನಿಂದ ಕುಳಿತು ಸರಿಯಾಗಿ ಪರೀಕ್ಷಿಸಲು ಸಾಂತ ಪ್ಪನ ಎದೆಯು ಒಂದೇ ಸವನೆ ಒಂದು ಗೇಣು ಮೇಲಕ್ಕೆ ಹಾರಿತು)

ಡಾಕ್ಟರ್:—(ಕೂಡಲೆ ಅಲ್ಲಿಂದೆದ್ದು ನ್ಯಾಯಾಧೀಶ ನನ್ನು ಕುರಿತು) Heartfailure ಹಾರ್ಟ್ ಫೈಲಿ ಯರ್ (ಎಂದಂದು ಹೊರಟು ಹೋಗುವನು. ಅಂಕದ ಪರದೆ ಬೀಳುವುದು.)

**—ಸಂಪೂರ್ಣ—**

---

# ಭಾರತದ ಉಪಮಂತ್ರಿ ಕರ್ನಲ್ ಮ್ಯೂರ್ ಹೆಡ್‌ರವರ ಸಂಚಾರ ಕಾರ್ಯಕ್ರಮ.

## ಉಪಮಂತ್ರಿಗಳಿಗೆ ಅತ್ಯದ್ಭುತ ಸ್ವಾಗತ!

ಇಂಗ್ಲೆಂಡಿನಿಂದ ದಯಾಳು ಬ್ರಿಟಿಷ್ ಸರಕಾರವು ತಿಂಗಳೊಂದರ ಹತ್ತಿಪ್ಪತ್ತು ಮಂದಿ ತಜ್ಞ (Experts) ರನ್ನು ಭಾರತಕ್ಕೆ ಕಳುಹಿಸಿತ್ತಿರುವುದಕ್ಕಾಗಿ ಭಾರತೀಯರು ಅವರನ್ನು ಎಷ್ಟು ಹೊಗಳಿದರೂ ಸಾಲದು ಸದ್ಯದಲ್ಲಿಯೇ ಭಾರತದ ಉಪಮಂತ್ರಿ (Under Secretary of State for India) ಗಳಾದ ಕರ್ನಲ್ ಮ್ಯೂರ್‌ಹೆಡ್‌ರವರು ಹಿಂದುಸ್ಥಾನಕ್ಕೆ ಬರುವರು.

**ಹಳ್ಳಿಯ ಪರಿಸ್ಥಿತಿ**

ಕರ್ನಲ್ ಮ್ಯೂರ್‌ಹೆಡ್‌ರವರು ಭಾರತದ ಪ್ರತಿಯೊಂದು ಹಳ್ಳಿಯನ್ನು ಸಂಚರಿಸಲಿದ್ದಾರೆ. ಅತ್ಯಂತ ಜನಪ್ರೀತ ವೈಸರಾಯರಾದ ಲಿನ್ಲಿತ್ಗೋಥೊರೆಗಳವರು ಎಷ್ಟರ ಮಟ್ಟಿಗೆ ಬೀಜದ ಹೋರಿಗಳನ್ನು ಗ್ರಾಮಗಳಲ್ಲಿ ತುಂಬಿದ್ದಾರೆ ಎಂಬುದನ್ನು ಇವರು ನೋಡುವರಲ್ಲದೆ ಕಾಂಗ್ರೆಸಿನವರು ಕಿಸಾನ್ ಚಳವಳವನ್ನು ಭರದಿಂದ ನಡೆಸುವಂತೆ ಒಂದು ಬಿನ್ನಹವನ್ನು ನಾಡದು ಢಿಲ್ಲಿಯಲ್ಲಿ ಮಾಡಲಿದ್ದಾರೆಂದು ತಿಳಿದು ಬಂದಿರುವುದಂತೆ.

**ಕಿಸಾನ್ ಚಳವಳ**

ಕರ್ನಲ್ ಮ್ಯೂರ್ ಹೆಡ್‌ರವರಿಗೆ ಕಿಸಾನ್ ಚಳವಳದಲ್ಲಿ ಅತ್ಯಾನಂದವೆಂದು ಪ್ರತೀತಿಯಿದೆ. ಈ ಮಹಾಶಯರು ಭಾರತಕ್ಕೆ ಬಂದೊಡನೆಯೇ ಅಖಿಲ ಭಾರತ ಕಿಸಾನ್ ಸಂಘದ ಅಧ್ಯಕ್ಷರಾದ ಪ್ರೊಫೆಸರ್ ಎನ್. ಜಿ. ರಂಗರವರನ್ನು ಕಂಡು, ಪ್ರಾರಂಭದಲ್ಲಿ ಡಾ। ಯನ್. ಬಿ. ಖರೆಯವರು ತನ್ನ ಸರ್ವಸ್ವವನ್ನು ಗಾಂಧಿಜಿಯವರ ಕೈಗೊಪ್ಪಿಸಿದಂತೆ ತನ್ನ ಸಂಚಾರ ಕಾರ್ಯಕ್ರಮವನ್ನು ಅವರಿಗೆ ಬಿಟ್ಟು ಕೊಡುವರು.

**ಕಾರ್ಯಕ್ರಮ**

ಕರ್ನಲ್ ಮ್ಯೂರ್ ಹೆಡ್‌ರವರ ಸಂಚಾರ ಕಾರ್ಯಕ್ರಮವನ್ನು ಶ್ರೀ. ರಂಗರವರು ಭಾರತದ ಪ್ರಸಿದ್ಧ ಕಿಸಾನ್ ಧುರೀಣೆಯರೂ, ನೂರಾರು ಕಿಸಾನ್ ಸಂಘಗಳನ್ನು ಕರ್ನಾಟಕದಲ್ಲಿ ಸ್ಥಾಪಿಸಿದವರೂ ಆದ ಶ್ರೀಮತಿ ಕಮಲಾದೇವಿಯರ ಸಹಕಾರದಿಂದ ತಯಾರಿಸುವರು. ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಸರಕಾರವು ಕರ್ನಲ್ ಸಾಹೇಬರಿಗೆ ಸರ್ವವಿಧದ ಸೌಕರ್ಯಗಳನ್ನು ಒದಗಿಸಲಿರುವುದು.

**ಬೀಜದ ಹೋರಿ!**

ಕರ್ನಲ್ ಮ್ಯೂರ್‌ಹೆಡ್‌ರವರು ಭಾರತದ ಹಲವಾರು ಕಡೆಗಳಲ್ಲಿ ಕೊಬ್ಬಿದ ದನಗಳನ್ನೂ ಬೀಜದ ಹೋರಿಗಳನ್ನೂ ಕಂಡು ಭಾರತದ ಸಂಪತ್ತು ಮತ್ತು ಬ್ರಿಟಿಷ್ ಸರಕಾರದ ಮಹತ್ವದ ಆಳ್ವಿಕೆಯ ಕುರಿತು ತನ್ನ ಸಮಾಧಾನವನ್ನು ವ್ಯಕ್ತಪಡಿಸುವರು. ಬೀಜದ ಹೋರಿಗಳನ್ನು ಹೆಚ್ಚಿಸುವ ಯೋಜನೆಯನ್ನು ಲಾರ್ಡ್ ಲಿನ್ಲಿತ್ಗೋರವರು ಜಾರಿಗೆ ತಂದು ಮಹಾ ಉಪಕಾರವನ್ನು ಮಾಡಿರುವರೆಂದೂ, ಭಾರತದ ಉದ್ಧಾರವು ಬೀಜದ ಹೋರಿಗಳಿಂದಲ್ಲದೆ ಮತ್ತಾವುದರಿಂದಲೂ ಆಗದೆಂದೂ ಅವರು ಹೇಳುವರು.

**ಸಿಮೆಂಟಿನ ಮಾರ್ಗಗಳು**

ಕೇಂದ್ರ ವಿಧಾಯಕ ಸಭೆಯ ಆರ್ಥಿಕ ಮಂತ್ರಿಗಳಾದ ಸರ್ ಜೇಮ್ಸ್ ಗ್ರಿಗ್ಗರವರು ಕರ್ನಲ್ ಸಾಹೇಬರು ಹೋಗುವಲ್ಲೆಲ್ಲಾ ಸಿಮೆಂಟಿನ ಮಾರ್ಗಗಳನ್ನು ಮಾಡಿಸುವರು. ಕೋಟಿಗಟ್ಟಲೆ ಹಣ ಖರ್ಚುಮಾಡದ್ದೇಕೆಂದು ಶ್ರೀ ಸತ್ಯಮೂರ್ತಿಯವರು ಎಸೆಂಬ್ಲಿಯಲ್ಲಿ ಕೇಳಿ ತನ್ನ ಪ್ರಶ್ನೆಯ ಬಾಣವನ್ನು ಬಿಟ್ಟೊಡನೆಯೇ ಗ್ರಿಗ್ಗರು—"ಏನಾಯಿತು, ಕೋಟಿಗಟ್ಟಲೆ ಹಣದಿಂದ ಕೋಟಿಗಟ್ಟಲೆ ಜನರ ಸಂಪರ್ಕವಾಗಲಿಲ್ಲವೆ? ಕಾಂಗ್ರೆಸಿನವರಾದ ನೀವು ಅದೆಷ್ಟು ಜನತಾ ಸಂಪರ್ಕ ಮಾಡಿದ್ದೀರಿ" ಎಂದು ಉತ್ತರವೀಯುವರು.

## ಕರಾಚಿಯಲ್ಲಿ

ಕರ್ನಲ್ ಮ್ಯೂರ್‌ಹೆಡ್‌ರವರಿಗೆ ಅತ್ಯಂತ ಭವ್ಯ ಸ್ವಾಗತವನ್ನೀಯಬೇಕೆಂಬ ಮಹದಿಚ್ಛೆಯಿಂದ ನಾನು ಈ ಲೇಖನ ಬರೆದಿರುವುದಲ್ಲದೆ ಕೆಳಗಿನ ಸೂಚನೆಗಳನ್ನೀಯಲಿಚ್ಛಿಸುತ್ತೇನೆ.

## ಧಾರ್ಮಿಕ ಬೋಧೆ

ಉಪಮಂತ್ರಿಗಳು ಕರಾಚಿಗೆ ಬಂದೊಡನೆಯೇ ಸಾಧು ಟಿ. ಯಲ್ ವಾಸ್ವಾನಿಯವರು ಅವರನ್ನು ಸ್ವಾಗತಿಸಬೇಕು. ಆ ಬಳಿಕ ಗೀತೆ ಮತ್ತು ಕುರಾನುಗಳ ಒಂದೆರಡು ಚರಣಗಳನ್ನೋದಿ ಅವುಗಳನ್ನು ವಿವರಿಸಬೇಕು.

## ಓಂ ಮಂಡಲಿಗೆ

ಇದಾದೊಡನೆಯೇ ಕರ್ನಲ್ ಸಾಹೇಬರನ್ನು ಓಂಮಂಡಲಿಗೆ ಕರೆದೊಯ್ದು, ಭಾಯಿ ಲೇಖರಾಜರನ್ನು ಕಂಡು ಮಾತಾಡಿಸುವಂತೆ ಮಾಡಿ, ಅಲ್ಲಿಯ "ಗೋಪಿ"ಯರನ್ನು ತೋರಿಸಿ ಎತ್ತಿನ ಗಾಡಿಯಲ್ಲಿ ಅವರನ್ನು ಮುಂಬಾಯಿಗೆ ಕರದುಕೊಂಡು ಬರಬೇಕು. ಅಲ್ಲಿ ಅವರನ್ನು ಶ್ರೀ. ಝಾಬವಾಲರ ವಶಕೊಟ್ಟು ಡಾ| ಅಂಬೆಡ್ಕಾರ್ ಮೊದಲಾದವರೊಡನೆ ಸಂಭಾಷಣೆ ನಡೆಸುವಂತೆ ಮಾಡಿ, ಪೂನದಲ್ಲಿ ಶ್ರೀ. ಸಾವರ್ಕರರು ಸಿಕ್ಕಿದರೆ ಅವರ "ರೈಫ್ಲ್ ಕ್ಲಬ್" ಗಳು ಎಷ್ಟರ ತನಕ ಯಶಸ್ವಿಯಾಗಿವೆಯೆಂಬ ವಿವರವನ್ನು ತಿಳಿಸಬೇಕು.

## ಮಧ್ಯಪ್ರಾಂತ್ಯದಲ್ಲಿ

ಕ್ರಿಮಿನಲ್ ಕಾಯಿದೆಯನ್ನು ರಕ್ಷಿಸಿರುವ ಶ್ರೀ. ರಾಜಗೋಪಾಲಾಚಾರ್ಯರನ್ನು ಹಾರ್ದಿಕವಾಗಿ ಅಭಿವಂದಿಸಿದ ಬಳಿಕ ಕರ್ನಲ್ ಸಾಹೇಬರು ತಿರುವಾಂಕೂರಿನ ದಿವಾನರ ರಾಜ್ಯಭರಣ ಕ್ರಮವನ್ನು ಪ್ರಶಂಸಿಸಿ ಅಲ್ಲಿಂದ ನೆಟ್ಟಗೆ ಬಂಗಾಳಕ್ಕೆ ತೆರಳುವರು. ಮ್ಯೂರ್ ಹೆಡ್ಡರು ಬಂಗಾಳದ ಹುಲಿಸಿಂಹ ಯಾನೆ ಫಜ್ಲುಲ್ ಹಕ್ ಕಂಪೆನಿಯನ್ನು ಕಲ್ಕತ್ತದಲ್ಲಿ ಕಂಡು ಮಂತ್ರಿಗಳ ಸಮಯೋಚಿತ ಗರ್ಜನೆಗಳಿಗಾಗಿ ತನ್ನ ಪ್ರಶಂಸೆಯನ್ನು ವ್ಯಕ್ತಪಡಿಸಿ, 'ಅಮೃತ ಬಜಾರ್' ಮತ್ತು 'ಹಿಂದುಸ್ಥಾನ ಸ್ಟಾಂಡಾರ್ಡ್' ಎಂಬ ಎರಡು ರಾಷ್ಟ್ರೀಯ ಪತ್ರಿಕೆಗಳು ಜಗಳಮಾಡಿಕೊಳ್ಳುವುದಕ್ಕಾಗಿ ಇತ್ತಂಡದವರನ್ನು ಹೊಗಳಿ ಮಧ್ಯಪ್ರಾಂತ್ಯಕ್ಕೆ ಬರುವರು. ಕರ್ನಲ್ ಸಾಹೇಬರಿಗೆ ಡಾ| ಯನ್. ಬಿ. ಖರೆಯವರ ಭೇಟಿಯಾಗುವುದು. ಡಾ| ಖರೆಯವರು ಪ್ರಜಾಸತ್ತಾತ್ಮಕ ತತ್ವಗಳಿಗಾಗಿ ಹೋರಾಡುವುದನ್ನು ಕಂಡು ಸಂತೋಷಪಟ್ಟು, ಬಳಿಕ ಉಪಮಂತ್ರಿಗಳು ಶಿವಗಾಂವ್ ಹರಿಜನ ಸತ್ಯಾಗ್ರಹದ ಧುರೀಣರಾದ ಶ್ರೀ. ಖಾಂಡೇಕರರವರಿಗೆ ಅಭಿವಂದನಾ ತಂತಿಯನ್ನು ಬಿಡುವರು.

## ಪಂಜಾಬಿನಲ್ಲಿ

ಸರ್ ಸಿಕಂದರ್ ಹಯಾತ್ ಖಾನರು ಪಂಜಾಬಿನಲ್ಲಿ ಸೈನ್ಯ ಸುಧಾರಣೆ ಮಸೂದೆಗೆ ಪೂರ್ಣ ಬೆಂಬಲವಿತ್ತು ಅಫಘಾನಿಸ್ಥಾನದ ಮೂಲಕ ವೈರಿಗಳು ಭಾರತವನ್ನು ನುಗ್ಗಿದರೆ ಸಂರಕ್ಷಣೆಗಾಗಿ ಸೈನ್ಯವು ಅತ್ಯವಶ್ಯವೆಂದು ಹೇಳಿದ ಮಾತಿನ ಸೊಬಗಿಗಾಗಿ ಕರ್ನಲ್ ಸಾಹೇಬರು ಅವರನ್ನು ಭಾರೀ ಹೊಗಳಿ, ಕಿಸಾನ್ ಸಂಘದ ಅಧ್ಯಕ್ಷರಾದ ಪ್ರೊ. ರಂಗರವರು ಅವರ ಕಾರ್ಯಕ್ರಮವನ್ನು ಯಶಸ್ವಿಯಾಗಿ ತಯಾರಿಸಿದ್ದಕ್ಕಾಗಿ ಅವರನ್ನು ಹಾರ್ದಿಕವಾಗಿ ಅಭಿವಂದಿಸಿ, ಗಡಿನಾಡಿನಲ್ಲಿರುವ ಇಪಿ ಫಕೀರರನ್ನು ಹುಡುಕುತ್ತಾ ಕರ್ನಲ್ ಸಾಹೇಬರು ಹೋಗುವರು. ಭಾಗ್ಯವಶಾತ್ ದಾರಿಯಲ್ಲಿ ಹಿಮಾಲಯ ಪರ್ವತಾರೋಹಿಗಳು ಸಿಕ್ಕಿದರೆ ಅವರೊಡನೆ ಸೇರಿ ಎವರೆಸ್ಟ್ ಶಿಖರವನ್ನೇರಿ ಬಿಡಲೂ ಬಹುದು.

ಅವರು ಯಾರೊಡನೆ ಯೂ ಫೆಡರೇಶನಿನ ಕುರಿತು ಚರ್ಚಿಸಲಾರರೆಂದು 'ರಾಯಿಟರ್' ತಂತಿಯು ಆಶ್ವಾಸನೆಯಿತ್ತಿದೆ.

---

(೪೫ನೇ ಪುಟದಿಂದ)

ಪೀಡೆಯು ಅಧಿಕವಾಗುವದು. ಸುಖಹೀನವಾದ ನಿಮ್ಮ ಶರೀರವು ದುಃಖದಿಂದ ಬಳಲಿ ಬೆಂಡಾಗುವುದು. ಅಂತೂ ನೀವು ಒಳ್ಳೇ ಕರ್ಮಠರಿರುವುದರಿಂದ ವಾರದ ಮಧ್ಯ ಭಾಗದಲ್ಲಿ ಆರೋಗ್ಯ, ಸುಖಗಳನ್ನು ಹೊಂದುವಿರಿ.

**ಮೀನ:—**

ಕಳೆದ ವಾರದಂತೆಯೇ ನಿಮಗೆ ಈ ವಾರದ ಭವಿಷ್ಯವಿರುವುದು. ಕೆಲವೊಂದು ಭಾಗದ ಮಟ್ಟಿಗೆ ಹೆಚ್ಚು ಕಡಿಮೆಯಿರುವುದು. ಪ್ರವಾಸ ವಿಷಯದಲ್ಲಿ ಈ ವಾರವು ನಿಮಗೆ ಎಷ್ಟರ ಮಟ್ಟಿಗೂ ಒಳ್ಳೆಯದಲ್ಲವು ವ್ಯವಹಾರಿಕ ಕಾರ್ಯಗಳಲ್ಲಿ ಜಯವಿರುವುದು. ಹಿಂದಿನ ಕಲಹವು ನಿವೃತ್ತಿಯಾಗಿ ಶತ್ರುಗಳು ಮಿತ್ರರಾಗುವರು. ಆರೋಗ್ಯವು ಕೆಟ್ಟು ಸಣ್ಣ ಸಣ್ಣ ರೋಗಗಳು ತಲೆದೋರುವವು. ಸಮೀಪದ ಜನರ ವಿಯೋಗದಿಂದಾಗಿ ಮನಸ್ಸಿಗೆ ಭೇದವಾಗುವುದು. ತಾ. 21. 22 ಈ ದಿನಗಳಲ್ಲಿ ಆರೋಗ್ಯಲಾಭ, ಶೋಕನಾಶವಾಗುವುದು.

—ಬಾಲಭಾಸ್ಕರ

# ಎಸೆಂಬ್ಲಿಯಲ್ಲಿ ಕಥೆ ಹೇಳುವ ಸದಸ್ಯರು

## ಕೇಂದ್ರ ವಿಧಾಯಕ ಸಭೆಯ ಕೆಲವು ಅರೆನೋಟಗಳು

●

ಕೇಂದ್ರ ವಿಧಾಯಕ ಸಭೆಯ ಸದಸ್ಯರು ಗಹನವಾದ ವಿಚಾರಗಳ ಕುರಿತಲ್ಲದೆ ಸರ್ವಥಾ ವಿನೋದ ಮಾಡುವ ಜನರಲ್ಲವೆಂದು ಹೆಚ್ಚಿನವರ ಎಣಿಕೆಯಿರಬಹುದು. ಆದರೆ ಸದಸ್ಯರು ಆಗಾಗ ವಿನೋದಾತ್ಮಕ ಮಾತುಗಳನ್ನಾಡುವುದನ್ನು ಪತ್ರಿಕೆಗಳಲ್ಲಿ ನೀವು ಓದಿರಬಹುದು.

●

ಕೆಲವು ಎಮ್. ಎಲ್. ಎ. ಯರು ಸ್ವಾರಸ್ಯದ ಕತೆಗಳನ್ನು ಹೇಳಿ ವಿಧಾಯಕಸಭೆಯ ಮನ್ನಣೆಗೆ ಪಾತ್ರವಾಗುವುದುಂಟು. ಡಾ| ಸರ್ ಝಿಯಾಉದ್ದೀನ್ ಅಹಮದ್‌ರವರು ಕತೆ ಹೇಳುವುದರಲ್ಲಿ ಬಹಳ ನಿಪುಣರು. ತನ್ನ ಹೆಗಲ ಮೇಲಿರುವ ಜವಾಬ್ದಾರಿಗಳಿಂದ ಇವರ ಕತೆಗಳು ಇತ್ತೀಚೆಗೆ ಕೇಳಿಸದಿದ್ದರೂ ಕತೆಗಳ ನೆನಪು ಅವರಿಗಾಗುತ್ತದೆ. ಮುಸ್ಲಿಮ್ ಲೀಗಿನ ಪ್ರಾಮುಖ್ಯ ಸದಸ್ಯರಲ್ಲೊಬ್ಬರಾಗಿರುವುದರಿಂದ ಅವರು ಕತೆ ಹೇಳುವ ಕೆಲಸವನ್ನು ಮಾಡದೆ ವಿರೋಧ ಪಕ್ಷದ ಕಾರ್ಯವನ್ನು ಪೂರೈಸುತ್ತಿದ್ದಾರೆ.

●

ಕಾಂಗ್ರೆಸ್ ಪಕ್ಷದ ಲಾಲಾ ಶ್ಯಾಮಲಾಲರವರು ಕತೆ ಹೇಳುವವರಲ್ಲಿ ಅಗ್ರಸ್ಥಾನವನ್ನು ಪಡೆಯುತ್ತಾರೆ. ಶ್ರೀ. ಶ್ರೀಪ್ರಕಾಶರವರು 'ವಿನೋದದ ರಾಜಕುಮಾರ" ಎಂಬ ಬಿರುದನ್ನೇ ಪಡೆದು ಬಿಟ್ಟಿದ್ದಾರೆ. ಡಾ| ದೇಶಮುಖರವರು ಕೂಡಾ ಅವರಿಗಿಂತ ಹಿಂದಿಲ್ಲ.

●

### "ಒಕ್ಕಣ್ಣಿನ ಮುಗಿಲು"

ಇತ್ತೀಚೆಗೆ ಲಾಲಾ ಶ್ಯಾಮಲಾಲರು "ಒಕ್ಕಣ್ಣಿನ ಮುಗಿಲು" ಎಂಬೊಂದು ಕತೆಯನ್ನು ಎಸೆಂಬ್ಲಿಯಲ್ಲಿ ಹೇಳಿದರು: ಪಂಜಾಬಿನ ರೈತರ ತುಂಟತನಕ್ಕಾಗಿ ಮೋಡಗಳು ಅವರಿಗೆ ಸರಿಯಾದ ಪಾಠವನ್ನು ಕಲಿಸಲು ನಿಶ್ಚೈಸಿದುವು. ಅವುಗಳಲ್ಲಿ ಚಿಕ್ಕದೊಂದು ಮೋಡವು ಹೀಗಂದಿತಂತೆ: "ಮಳೆಯಿಲ್ಲ, ಬೆಳೆಯಿಲ್ಲ, ಕ್ಷಾಮ ಡಾಮರಗಳೆ ಗತಿ" ಆಗ ಎದ್ದಿತು ಒಕ್ಕಣ್ಣಿನ ಒಂದು ಮೋಡ: "ನಾವು ಸಂಪೂರ್ಣವಾಗಿ ಮುಷ್ಕರ ಹೂಡುವುದರಲ್ಲಿ ಅರ್ಥವಿಲ್ಲ. ಸ್ವಲ್ಪ ಮಳೆಗರೆಯೋಣ.ಆಗ ರೈತರು ಬೀಜಗಳನ್ನು ಬಿತ್ತುವರು. ಮಳೆಯಿಲ್ಲದೆ ಬೆಳೆಯಾಗದೆ ಕ್ಷಾಮವು ಕೂಡಲೆ ಬಂದೊದಗುವುದು."

ಮಹತ್ವದ ವಿಚಾರಗಳನ್ನು ಚರ್ಚಿಸುತ್ತಿರುತಾಗ ಇಂತಹ ಕತೆಗಳು ನಗುವಿಗೆಡೆಕೊಡುವುದಲ್ಲದೆ ಚರ್ಚೆಯ ವಿಷಯವನ್ನು ಸ್ಪಷ್ಟೀಕರಿಸುತ್ತವೆ.

●

### "ಮಾನ ಸಂರಕ್ಷಣೆ"

ಶ್ರೀ. ಶ್ರೀಪ್ರಕಾಶರ "ಜಾತನ ಮಾನ"ವೆಂಬ ಕತೆಯು ಮತ್ತಷ್ಟು ಸ್ವಾರಸ್ಯದ್ದಾಗಿದೆ. ಸರಕಾರೀ ಪಕ್ಷವು ತನ್ನ ಮಾನವನ್ನು ಕಾಯ್ದುಕೊಂಡುದನ್ನು ವಿವರಿಸುತ್ತಾ ಶ್ರೀಪ್ರಕಾಶರಂದರು:

ಮಹಿಳೆಯರ ಒಂದು ಪರಿಷತ್ತಿನಲ್ಲಿ ಒಬ್ಬ ಜಾತ ಪುರುಷನ ಮೇಲೆ ಸ್ತ್ರೀಯೊಬ್ಬಳು ಸ್ವತಃ ಕಾಯಿದೆಯನ್ನು ಜಾರಿ ಮಾಡುತ್ತಾ ತನ್ನ ಕಾಲಿನ ಪಾದರಕ್ಷೆಯನ್ನು ಅವನ ಮೇಲೆ ಬಿಸಾಡಿಯೇ ಬಿಟ್ಟಳು. ಪಾದರಕ್ಷೆಯ ಪೆಟ್ಟಿನಿಂದಾಗಿ ಅವನು ತನ್ನ ತಲೆಯನ್ನು ತಗ್ಗಿಸಬೇಕಾದರೂ, ಅವರ ಮೇಲಿದ್ದ ಮುಂಡಾಸನ್ನು ಮುಟ್ಟಿ—'ನಾನು ನನ್ನ ಮುಂಡಾಸನ್ನು ಕಳೆದುಕೊಳ್ಳದಿರುವುದರಿಂದ ಮಾನವನ್ನು ರಕ್ಷಿಸಿದಂತಾಯಿತು' ಎಂದನು.

ಎಸೆಂಬ್ಲಿಯಲ್ಲಿ ಸರಕಾರೀ ಪಕ್ಷದ ಸದಸ್ಯರನ್ನು ಕಂಡೊಡನೆ ವಿರೋಧ ಪಕ್ಷದವರು ನಗುತ್ತಾ "ಮುಂಡಾಸಿನ ರಕ್ಷಣೆಯಾಯಿತು" ಎಂದು ಹಲವಾರು ದಿನಗಳ ತನಕ ಹೇಳುತ್ತಿದ್ದರು.

●

### ಶ್ರೀಪ್ರಕಾಶರ ವಿನೋದ.

ಶ್ರೀಪ್ರಕಾಶರ ವಿನೋದವು ಎಂಥವರನ್ನೂ ನಗಿಸಿ ಬಿಡುತ್ತದೆ. ದೇರಾ ನವಾಬರಿಗೆ "ನ್ಯಾಟ್" (Knight) ಎಂಬ ಬಿರುದಿದೆ. ಉಚ್ಚಾರದಲ್ಲಿ ರಾತ್ರಿಯ ಅರ್ಥ ಬರುವ "ನೈಟ್" ಶಬ್ದ ಮತ್ತು ಅದು ಒಂದೇ ಆಗಿರುವುದರಿಂದ ಶ್ರೀಪ್ರಕಾಶರು ಅವರ ಕುರಿತು ಒಮ್ಮೆ

ಹೀಗಂದರು: "ದೇರಾ ನವಾಬರ ಶಾಶ್ವತ ರಾತ್ರಿಯಲ್ಲಿ ಚಂದ್ರನೇ ಮೂಡುವುದಿಲ್ಲ" ಇದನ್ನು ಕೇಳಿದಾಗ ನವಾಬರು ಕೂಡಾ ನಕ್ಕು ಬಿಟ್ಟರು.

●

## ಸೈನಿಕನಾರು?

ಸೈನಿಕನೆಂಬುದಕ್ಕೆ ಶ್ರೀಪ್ರಕಾಶರ ಶಬ್ದ ಕೋಶದಲ್ಲಿ ಬೇರೆಯೇ ಅರ್ಥವಿದೆ. ಅವರ ಅರ್ಥವು ಇನ್ನಾವ ರಾಷ್ಟ್ರದ ಶಬ್ದ ಕೋಶದಲ್ಲಿಯೂ ಸಿಗಲಾರದು.

"ಗುಂಡು ಹೊಡೆಯುವುದಕ್ಕಾಗಿ ಬಾಡಿಗೆಗೆ ತೆಗೆದು ಕೊಳ್ಳಲ್ಪಡುವವ ಸೈನಿಕ"

"ಗುಂಡಿನ ಪೆಟ್ಟು ಬೀಳುವ ತನಕ ಅತ್ತಿತ್ತ ತಿರುಗುವವನೆ ಸೈನಿಕ"

ಮೊನ್ನೆ ಮೊನ್ನೆ ಒಂದು ಚರ್ಚೆಯಾಗುವಾಗ ಒಬ್ಬರು ನಗಾಡಿಬಿಟ್ಟರು. ಶ್ರೀಪ್ರಕಾಶರು ಕೂಡಲೆ ಕಠಿನ ಮುಖ ಭಾವದಿಂದ ಅಧ್ಯಕ್ಷರೆಡೆಗೆ ನೋಡಿ, "ಅವರು ಆ ನಗುವನ್ನು ಹಿಂತೆಗೆಯ ಬೇಕು ಸ್ವಾಮಿ" ಎಂದರು. ಇಷ್ಟು ಹೇಳಿದ್ದೇ ತಡ. ಮಾಡಿನ ಹಂಚುಗಳು ಹಾರಿ ಹೋಗುವ ತನಕ ಎಲ್ಲಾ ಸದಸ್ಯರು ನಗಾಡಿದರು.

●

ಮೌಲಾನಾ ಶೌಕತಾಲಿಯವರೂ ವಿನೋದದಲ್ಲಿ ಕಡಿಮೆಯವರಲ್ಲ. ಒಮ್ಮೆ ಅವರು ಒಂದು ಗ್ರಾಮದಲ್ಲಿ ಈ ಕೆಳಗಿನಂತೆ ಸಂಭಾಷಣೆ ನಡೆಸಿದರಂತೆ:

"ನಿನ್ನ ಹೆಸರೇನು?"

"ನನ್ನ ಹೆಸರು ಕಬ್ಬು."

"ನೀನೇನನ್ನು ತಿನ್ನುತ್ತಿ?"

"ನಾನು ಮಣ ಮಣ ರೊಟ್ಟಿ ತಿನ್ನುತ್ತೇನೆ."

"ಕುಡಿಯುವುದೇನು?"

"ಗಡಿಗೆ ತುಂಬಾ ನೀರು!"

●

ಒಮ್ಮೆ ಶ್ರೀ. ಕೆ. ಯಸ್. ಗುಪ್ತರೊಡನೆ ಅಧ್ಯಕ್ಷ ಸರ್ ಅಬ್ದುಲ್ ರಹೀಮರು 'ಅಧ್ಯಕ್ಷರೊಡನೆ ಮಾತಾಡಿರಿ' ಎಂದರು.

"ಆಗ ಬಹುದು" ಎಂದು ಗುಪ್ತರುತ್ತರಪಿತರು.

ಕೂಡಲೆ ವೃದ್ಧ ಯಂ. ಯಸ್. ಆಣೆಯವರು— "ಅಧ್ಯಕ್ಷರನ್ನು ಸಂಬೋಧಿಸಿರಿ. ಆದರೆ ನಮ್ಮನ್ನು ನೋಡಿರಿ" ಎಂದರು. ಕೂಡಲೆ ಎಲ್ಲರೂ ಪ್ರಚಂಡವಾಗಿ ನಗಲಾರಂಭಿಸಿದರು.

●

## "ಮಡದಿ ಕಾಣೆ"

ಮೊನ್ನೆ ಎಸೆಂಬ್ಲಿಯಲ್ಲಿ ರಿಕ್ರೂಟ್‌ಮೆಂಟ್‌ಮಸೂದೆಯು ಮಂಜೂರಾಯಿತಷ್ಟೆ. ಪಂಜಾಬ್ ಪ್ರಾಂತ್ಯದವರು ಅದನ್ನು ಸಮರ್ಥಿಸಿರುವರೆಂದು ಸರಕಾರೀ ಪಕ್ಷದವರು ಹೇಳಿದುದನ್ನು ಕೇಳಿ ಶ್ರೀ. ಪ್ರಕಾಶರು ಅದನ್ನು ಹೀಗೆ ಚಿತ್ರಿಸಿದರು:-

ಒಬ್ಬ ಗಂಡ ಡಿಪ್ಯುಟಿ ಕಮಿಷನರರಿಗೆ ಹೀಗೆಂದು ತಂತಿ ಕೊಟ್ಟ 'ಮಡದಿ ಕಾಣೆಯಾಗಿದ್ದಾಳೆ. ಆಕೆಯನ್ನು ಹುಡುಕಿ ಅವಶ್ಯವಿದ್ದುದನ್ನೆಲ್ಲಾ ಮಾಡಿರಿ". ಇದರಂತೆಯೇ ಪಂಜಾಬ್ ಪ್ರಾಂತ್ಯವು ಬ್ರಿಟಿಷ್ ಸಾಮ್ರಾಜ್ಯಶಾಹಿಯೊಡನೆ "ನೀವು ಸಂರಕ್ಷಣೆ ಮತ್ತು ಇನ್ನಿತರ ಕೆಲಸಗಳ ಜವಾಬ್ದಾರಿಯನ್ನು ವಹಿಸಿರಿ" ಎಂದು ಹೇಳಿತೆಂದು ಶ್ರೀ ಪ್ರಕಾಶರ ವಿಮರ್ಶೆ.

ಶ್ರೀ. ಶ್ರೀಪ್ರಕಾಶರು ಇನ್ನೊಂದು ಸಂದರ್ಭದಲ್ಲಿ—ಸೈನ್ಯ ಮಸೂದೆಯ ಕರಡು ಪ್ರತಿಯು ಪೂರಾ ತಪ್ಪೆಂದು ಹೇಳಿದಾಗ ಎಸೆಂಬ್ಲಿಯಲ್ಲಿ ವಿನೋದದ ಮಿಂಚೊಂದು ಹೊಳೆದು ಬಿಟ್ಟಿತು.

ಡಾ| ದೇಶಮುಖರವರ ಮಹತ್ವದ ಸೂಚನೆಯು ಬಂದೇ ಬಿಟ್ಟಿತು. "ಹಾಗಾದರೆ ಪ್ರಾರಂಭದಿಂದಲೇ ಬೇರೆ ಬರೆಯಿರಿ" ಕೂಡಲೆ ಎಲ್ಲರೂ ನಗಾಡಿದರು.

●

ಸೈನಿಕರನ್ನು ಸೇರಿಸುವ ಕುರಿತು ಚರ್ಚೆಯಾಗುವಾಗ ಹೀಗನ್ನಲ್ಪಟ್ಟಿತು. ಕಾಯಿದೆಯಾಗಲಿ ಬೇಕಾಯಿದೆಯಾಗಲಿ, ನಮ್ಮಲ್ಲಾ ಮೆಂಬರರು ಐವತ್ತು ವರುಷ ಪ್ರಾಯದವರಾದುದರಿಂದ ಅವರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುವ ಸಂದರ್ಭವು ಬರಲಿಕ್ಕಿಲ್ಲ. ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಸೈನಿಕರು ಬೇಕಾಗಿದ್ದಾರೆ.

೫೦ ವರುಷಕ್ಕಿಂತ ಮಿಕ್ಕಿದವರನ್ನು ಶ್ರೀ ಶ್ರೀಪ್ರಕಾಶರು "ಹಳೆ ಮುದುಕಿಯರು" ಎಂದೊಡನೆಯೇ ಪ್ರಚಂಡ ನಗೆ.

●

ಕೇಂದ್ರ ವಿಧಾಯಕ ಸಭೆಯ ವಿನೋದಗಳು ಎಂಥವರನ್ನೂ ನಗಿಸಬಲ್ಲವು. ಎಲ್ಲರಿಗಿಂತಲೂ ಶ್ರೀ. ಶ್ರೀಪ್ರಕಾಶರೇ ಇತರರನ್ನು ನಗಿಸುವ ಹೊಣೆಗಾರಿಕೆಯನ್ನು ವಹಿಸಿ ಕೊಂಡಿದ್ದಾರೆ.

# "ಬೀಡಾ ಬೀಡಾ"

ಪ್ರಿಯ, ವಾಚಕನೇ.

ಕ್ರಿಮಿ ಕೀಟಗಳಿಗೂ ಇಲಿ ಹೆಗ್ಗಣಗಳಿಗೂ ಬೇಡವಾದ ಹೊಗೆಸೊಪ್ಪನ್ನು ಮನುಷ್ಯನು ಯಾವ್ಯಾವ ರೂಪದಿಂದ ತನ್ನ ಪವಿತ್ರವಾದ ದೇಹದೊಳಗೆ ಪ್ರವೇಶಿಸಿಕೊಳ್ಳುತ್ತಾನೆಂದು ನೀನು ಯೋಚಿಸಿರುವೆಯಾ? ಅದನ್ನು ಕೆಂಡದಲ್ಲಿ ಕಾಸಿ ಪುಡಿಮಾಡಿ ತನ್ನ ಮೂಗಿನ ಸೊಳ್ಳೆಯೊಳಗೆ ತುಂಬಿಸಿಕೊಳ್ಳುವ ಮತ್ತು ಬಿಸಿಲಲ್ಲಿ ಹಾಕಿ ಪುಡಿಮಾಡಿ ಒಣಗಿದ ಎಲೆಯಲ್ಲಾಗಲಿ ಕಾಗದದಲ್ಲಾಗಲಿ ಸುತ್ತಿ ಬೆಂಕಿ ಹಿಡಿಸಿ ಅದರ ಹೊಗೆಯನ್ನು ತನ್ನ ಬಾಯೊಳಗೆ ಮತ್ತು ಮೂಗಿನೊಳಗೆ ತುಂಬಿಸಿಕೊಳ್ಳುವ ದುರಭ್ಯಾಸಗಳ ವಿಷಯ ಈ ಮೊದಲು ಎರಡು ಲೇಖನಗಳನ್ನು ಬರೆದಿದ್ದೆ. ಅದನ್ನು ಇದ್ದಂತೆಯೇ ಮಡಚಿ ವೀಳ್ಯದೆಲೆ ಸುಣ್ಣ ಅಡಿಕೆ ಇವುಗಳೊಂದಿಗೆ ಬಾಯಲ್ಲಿ ಜಗಿದು ರಸವನ್ನೂ ಕಸವನ್ನೂ ಉಗುಳುವ ದುರಭ್ಯಾಸದ ವಿಷಯ ನಿನಗೆ ಎರಡು ಮಾತು ಹೇಳಬೇಕೆಂದಿದ್ದೇನೆ.

ಹೊಗೆಸೊಪ್ಪನ್ನು ಜಗಿಯುವ ದುರಭ್ಯಾಸವು ಈಗ ಎಲ್ಲಾ ಕಡೆಗಳಲ್ಲಿಯೂ ಹಬ್ಬಿದೆ. ಜಗಿದು ನುಂಗದ ವಸ್ತುವೆಂದರೆ ಹೊಗೆಸೊಪ್ಪು ಒಂದೇ. ದಿನಕ್ಕೆ ಒಂದೆರಡುಸಲ ವೀಳ್ಯದೆಲೆಯನ್ನು ತಿಂದು ಅದರ ರಸವನ್ನು ನುಂಗುವುದು ಹಿತಕರವೆಂದು ವೈದ್ಯರೂ ಹೇಳುತ್ತಾರೆ. ಆದರೆ ಹೊಗೆಸೊಪ್ಪನ್ನು ಜಗಿದು ಯಾವಾಗಲೂ ಉಗುಳುತ್ತಾ ಇರುವುದು ದುರಭ್ಯಾಸವೆಂಬುದರಲ್ಲಿ ಸಂದೇಹವಿಲ್ಲ. ಜೀರ್ಣಕ್ಕೆ ಅತೀ ಅವಶ್ಯವಾದ ಬಾಯಿಯಲ್ಲಿರುವ ನೀರನ್ನು ಉಗುಳುತ್ತಾ ಹೋದರೆ ಆರೋಗ್ಯವು ಕೆಡುವುದು ಎಂಬುದು ಯಾರಿಗೂ ತಿಳಿಯದಿರಲಿಕ್ಕಿಲ್ಲ. ಹೊಗೆಸೊಪ್ಪು ಜಗಿಯುವವನಿಗೆ ದಿನವಿಡೀ ಉಗುಳುವುದೇ ಕೆಲಸ. ಹಗಲಿಡೀ ಹೊಗೆಸೊಪ್ಪು ಜಗಿಯುವುದು ಸಾಲದುದಕ್ಕೆ ರಾತ್ರಿಯಲ್ಲಿಯೂ ಎಚ್ಚರವಾದಾಗಲೆಲ್ಲಾ ಕುಳಿತುಕೊಂಡು ಜಗಿಯುತ್ತಿರುವವರಿದ್ದಾರೆ. ಹಲ್ಲು ಹೋದವನಿಗೂ ಜಗಿಯಬೇಕೆಂಬ ಆಶೆ.

ಹೊಗೆಸೊಪ್ಪು ಜಗಿಯುವವನಿಗೆ ಉಗುಳುವ ರೋಗವಿದೆ ಎಂದು ಮೊದಲೇ ಹೇಳಿದೆನಲ್ಲಾ. ಅವನು ಕೂತಲ್ಲಿ ನಿಂತಲ್ಲಿ ಬಂದಲ್ಲಿ ಹೋದಲ್ಲಿ ಎಲ್ಲೆಲ್ಲಿಯೂ ಅವನ ಎಂಜಲು. ರೋಗಿಯ ಎಂಜಲನ್ನು ತುಳಿದವರಿಗೆ ಆ ರೋಗ ತಗಲುತ್ತದೆ. ಆ ಕಾರಣದಿಂದಲೇ ನಮ್ಮ ಹಿರಿಯರು ಎಂಜಲು ತುಳಿದರೆ ಸ್ನಾನಮಾಡಬೇಕೆಂದು ನಿಯಮಿಸಿರುತ್ತಾರೆ. ಈಗ ಅದು ಸಾಧ್ಯವೇ? ಈ ಹೊಗೆಸೊಪ್ಪು ಜಗಿಯುವವರ ದೆಸೆಯಿಂದಾಗಿ ಎಲ್ಲೆಲ್ಲಿಯೂ ಅವರ ಕೆಂಪು ಎಂಜಲು. ಮಾರ್ಗದಲ್ಲಿ, ಅಂಗಡಿಯ ಮೂಲೆಯಲ್ಲಿ, ಅಂಗಳದಲ್ಲಿ, ಎಲ್ಲಾ ಕಡೆಗಳಲ್ಲಿಯೂ ಎಂಜಲು ಇದ್ದರೆ ಅದನ್ನು ತುಳಿಯದೆ ನಡೆಯುವುದು ಹೇಗೆ? ಹೊಗೆಸೊಪ್ಪು ಜಗಿಯುವವರು ತಮ್ಮ ರೋಗಾಣುಗಳನ್ನು ಇತರರಿಗೆ ಹಂಚುವ ಪಾಪಿಗಳಲ್ಲವೇ? ಇಂಥವರನ್ನು ಪ್ರತ್ಯೇಕ ಒಂದು ಕಡೆಯಲ್ಲಿ ಇರಗೊಡಿಸಲು ಸಾಧ್ಯವಿದ್ದರೆ ಎಷ್ಟು ಒಳ್ಳೆಯದಿತ್ತು. ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಉಗುಳುವವನನ್ನು ಶಿಕ್ಷಿಸುವ ಕಾನೂನು ಮಾಡಬೇಕು. ಆವರೆಗೆ ಪಟ್ಟಣದ ಮಾರ್ಗಗಳಲ್ಲಿ ನಡೆಯುವವರೆಲ್ಲರೂ ಪಾದರಕ್ಷೆಯನ್ನು ಹಾಕಿಕೊಂಡು ತಮ್ಮನ್ನು ರಕ್ಷಿಸಿಕೊಳ್ಳಬೇಕು ವಿನಾ ಬೇರೆ ಉಪಾಯವಿಲ್ಲ. ಹೊಗೆಸೊಪ್ಪು ಜಗಿಯುವವನಿಗೆ ಎಲ್ಲಿ ಉಗುಳುವುದೆಂದು ನಿಯಮವಿಲ್ಲ. ಚಾವಡಿಯಲ್ಲಿ ಕುಳಿತು ಅಂಗಳಕ್ಕೆ ಉಗುಳಿಬಿಡುತ್ತಾನೆ. ಉಗುಳುವುದಕ್ಕಾಗಿ ಏಳಲಾರದ ಪುಣ್ಯಾತ್ಮನು ಕುಳಿತಲ್ಲೇ ಉಗುಳುವುದಕ್ಕೆ ಪೀಕದಾನಿಯನ್ನು ಮಾಡಿಕೊಳ್ಳುತ್ತಾನೆ. ಕೆಲವರು ಮನೆಯ ಕಿಟಕಿಗಳಿಂದಲೇ ಉಗುಳಿ ಅಸಹ್ಯ ಮಾಡುತ್ತಾರೆ. ಹೊಗೆಸೊಪ್ಪು ಜಗಿದು ಉಗುಳಿ ತಾವು ಹಾಳಾಗುವುದು ಬೇರೆ, ತಮ್ಮ ಎಂಜಲನ್ನು ಅಲ್ಲಲ್ಲಿ ಉಗುಳಿ ಇತರರ ಆರೋಗ್ಯವನ್ನು ಕೆಡಿಸುವುದು ಬೇರೆ. ನಶ್ಯ ಬೀಡಿ ಸೇದುವವನು ತನ್ನನ್ನೇ ತಾನು ಹಾಳುಮಾಡಿಕೊಳ್ಳುತ್ತಿದ್ದಾನೆ. ಹೊಗೆಸೊಪ್ಪು ಜಗಿಯುವವನು ಎಲ್ಲರನ್ನೂ ಹಾಳುಮಾಡುತ್ತಿದ್ದಾನೆ.

ಇನ್ನು ಈ ದುರಾಭ್ಯಾಸದಿಂದ ಆಗುವ ಖರ್ಚಿಗೆ ಮಿತಿಯಿದೆಯೇ? ನಮ್ಮ ಹಿಂದಿನವರು ಇದಕ್ಕೆ ಬೇಕಾದ

ಸಾಹಿತ್ಯಗಳನ್ನು ಒಂದು ಚೀಲದಲ್ಲಿ ಹಾಕಿಕೊಂಡು ಹೋಗುತ್ತಿದ್ದರು. ಈಗಿನವರಿಗೆ ಆ ಕಷ್ಟವಿಲ್ಲ. ಅದರ ಬದಲಿಗೆ ಜೇಬಿನಲ್ಲಿ ಚಿಲ್ಲರೆಹಣ ಹಿಡಿದುಕೊಂಡರಾಯಿತು. ಮಾರ್ಗದ ಸಂದು ಮೂಲೆಗಳಲ್ಲಿ, ಬಸ್ಸು ಸ್ಟೇಶನುಗಳಲ್ಲಿ, ಸಂತೆಗಳಲ್ಲಿ ಮನುಷ್ಯ ಜಾತಿಯನ್ನು ಕಂಡಕೂಡಲೆ ನಾಲ್ಕು ಕಡೆಗಳಿಂದ 'ಬೀಡಾ ಬೀಡಾ' ಎಂದು ಓಡಿಬರುವ ಹುಡುಗರಿದ್ದಾರೆ. ಒಂದು ಪೈ ಬಿಸಾಡಿಬಿಟ್ಟರೆ ಸರಿ, ಎರಡು ಎಲೆ, ಎರಡುತುಂಡು ಅಡಿಕೆ, ಸ್ವಲ್ಪ ಸುಣ್ಣ, ಅರ್ಧಇಂಚು ಹೊಗೆಸೊಪ್ಪು, ಇವನ್ನೆಲ್ಲಾ ಗಟ್ಟಿಯಾಗಿ ಹಿಡಿದುಕೊಳ್ಳುವುದಕ್ಕೆ ಒಂದು ಲವಂಗ. ಈ ಪಂಚದ್ರವ್ಯಗಳು ಒಂದು ಪೈಯೊಳಗೆ ಸಿಕ್ಕುವಾಗ ಇವನ್ನೆಲ್ಲಾ ಚೀಲದಲ್ಲಿ ಹೊತ್ತುಕೊಳ್ಳುವ ಕಷ್ಟ ಯಾರಿಗೆ ಬೇಕಾಗಿದೆ? ಕ್ರಮಪ್ರಕಾರ ಜಗಿಯುವವನಿಗೆ ಕಡಿಮೆ ಎಂದರೂ ಒಂದಾಣೆಯ ಬೀಡಗಳು ಬೇಕು. ದಿನಕ್ಕೆ ಒಂದಾಣೆಯೆಂದರೆ ಎಷ್ಟಾಯಿತು ಎಂದು ಲೆಕ್ಕ ಮಾಡುವವರ್ಯಾರು? ಒಬ್ಬ ವಿಧವೆಗೆ ಇದಕ್ಕಿಂತ ಹೆಚ್ಚು ಅಶನಾರ್ಥ ದೊರೆಯುವುದಿಲ್ಲ. ಹೊಟ್ಟೆಗೆ ತಿನ್ನುವುದಕ್ಕೆ ಬೇಕಾದಷ್ಟು ಮನೆಯಲ್ಲಿಲ್ಲದಿರುವಾಗ ಇಷ್ಟು ಹಣವನ್ನು ಜಗಿದು ಉಗುಳುವುದಾದರೆ ಏನೆನ್ನಬೇಕು?

ಆದುದರಿಂದ ಪ್ರಿಯ ವಾಚಕನೇ, ಹೊಗೆಸೊಪ್ಪು ನಿನ್ನಮೇಲೆ ಅಧಿಕಾರ ನಡೆಯಿಸಲಿಕ್ಕೆ ಬಿಡಬೇಡ. ಯಾವರೂಪದಿಂದಲೂ ಹೊಗೆಸೊಪ್ಪನ್ನು ಸೇವಿಸಬೇಡ. ನೀನು ಈ ದುರಭ್ಯಾಸದಲ್ಲಿ ಮೊದಲೇ ಸಿಕ್ಕಿಬಿದ್ದವನಾದರೆ ಅದನ್ನು ಬಿಡಲಿಕ್ಕೆ ಶತಪ್ರಯತ್ನಮಾಡು. ಹಾಗೂ ಇನ್ನೊಬ್ಬರನ್ನು ಕೆಡಿಸಲಿಕ್ಕೆ ಯತ್ನಿಸಬೇಡ. ಹೊಗೆಸೊಪ್ಪು, ಬೀಡಾ, ನಶ್ಯ, ಬೀಡಿ, ಸಿಗರೇಟು ಇವನ್ನು ಯಾರಿಗೂ ದಾನಮಾಡಬೇಡ. ಇತರರು ದಾನಮಾಡಿದರೆ ಅದನ್ನು ಸ್ವೀಕರಿಸಬೇಡ, ಬಹಿಷ್ಕರಿಸು. ಹೊಗೆಸೊಪ್ಪನ್ನು ಖಂಡಿತವಾಗಿ ಬಹಿಷ್ಕರಿಸು.

ಪ್ರಿಯ ವಾಚಕನೇ ಇದೇರೀತಿ ನಿನ್ನ ನಡೆನುಡಿಗಳ ವಿಷಯವಾಗಿ ಬರೆಯುತ್ತೇನೆ. ಅಂತರಂಗದಲ್ಲಿ ಓದುತ್ತಾ ಇರು. ನಿನಗೇನಾದರೂ ಕೇಳತಕ್ಕ ವಿಷಯಗಳಿದ್ದರೆ ನನ್ನಕೂಡೆ ಕೇಳು. ಅಂತರಂಗದಲ್ಲಿಯೇ ಅದಕ್ಕೆ ಉತ್ತರ ಬರೆಯುತ್ತೇನೆ. ಅಂತರಂಗದ ಮುಖಾಂತರ ನಡೆಯುವ ಯಾವಪತ್ರವೂ ಬಹಿರಂಗವಾದೀತೆಂದು ನೀನು ಅಂಜಬೇಡ.

ಬರುವ ಸಂಚಿಕೆಯಲ್ಲಿ ಸೋಡದ ವಿಷಯ ಬರೆಯುತ್ತೇನೆ. ನನ್ನ ವಿಳಾಸ ಬೇಕಿದ್ದರೆ:

**ಗೆಳೆಯ**

C/o. ಅಂತರಂಗ

ಉಡುಪಿ.



# ವಾರದ ಪಂಚಾಂಗ



ಬಹುಧಾನ್ಯ ಸಂ|ರದ ಭಾದ್ರಪದ ಕೃಷ್ಣ ಆಶ್ವಿನ ಶುಕ್ಲಪಕ್ಷ ದಕ್ಷಿಣಾಯನಂ.

●

ಸಪ್ಟಂಬರ ಕನ್ಯಾ (ನಿರ್ಸಾಲ) ೨ರಿಂದ ೮ರವರೆಗೆ ಮಹಾನಕ್ಷತ್ರ – ಉತ್ತರಾ

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 18 | ೯ | ರ೨೪| | ಆರ್೨೬ | ವ್ಯ೬॥ ಉ್ಪ೫೨। | ಗ೨೪। | ೫೪ | ೨॥ | ಅವಿಧವಾನವಮಿ ತಿಸ್ರಾಷ್ಟಕಂ |
| 19 | ೧೦ | ಚ೧೮| | ಪು್ನ೨೧||| | ಪ೫೧| | ಭ೧೮। | ೪೦॥ | ೧೬| | ಕರ್ಕಟೇಚ೭॥ಹು೨ಬು೧೨ |
| 20 | ೧೧ | ಕು೧೭। | ಪು್ಯ೧೭||| | ಶಿ೪೩॥ | ಬಾ೧೨| | ೪೭॥ | ೬||| | ಉ್ತ೩ರ೧೧ಸರ್ವೇಷಾಮೇಕಾದಶೀ ಯತಿದ್ವಾದಶೀ ಪ್ರದೋ ಕಲಿ |
| 21 | ೧೨ | ಬು೬॥ | ಆ್ಲ೧೪ | ಸಿ೩೬| | ತೈ೬॥ | ೪೨। | ೧೦। | ಯುಗಾದಿಃ |
| 22 | ೧೩ | ಗು೧|ಉ್ಪ ೫೫॥ | ಮ೧೦||| | ಸಾ೨೯||| | ವ೧| | ೨೯||| | ೫೨| | ಘಾತಕಚತುರ್ದಶೀ ಮಾಸ ಶಿಃ ರಾತ್ರಿಃ ಪಿತೃಮುಖಾ |
| 23 | ೩೦ | ಶು೫೩ | ಹು೮| | ಶು೨೩॥ | ಚ೨೪||| | ೨೫||| | ೪೯ | ● ಸರ್ವಪಿತೃ ಅಮವಾಸ್ಯಾ ತುಲಾ* *ಸಂಕ್ರಮಣಂ |
| 24 | ೧ | ಶ೫೦| | ಉ್ತ೬॥ | ಶು್ಲ೧೮। | ಕಿಂ೨೧॥ | ೨೭। | ೫೦॥|- | ನವರಾತ್ರ್ಯಾರಂಭಃನಾಶಯೋ.ಉ್ತ. |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 18 | ೯ | ರ೨೭॥ | ಆರ್೨೮ | ವ್ಯ೭। ಉ್ಪ೫೨॥ | ತೈ॥ | ೫೬ | ೪||| | |
| 19 | ೧೦ | ಚ೩೧। | ಪು್ನ೨೩||| | ಪ೫೧॥ | ಭ೨೧| | ೪೨ | ೧೮ | ಉ್ತ೩ರ೫೫ಕರ್ಕಟಕೆರ್ಚ॥|ಪೂ೨ [ಬು೨೪ |
| 20 | ೧೧ | ಕು೧೪||| | ಪು್ಯ೧೯ | ಶಿ೪೩ | ಬಾ೧೪||| | ೪೮| | ೪ | ವಿ೧ಶು೪೭ಸರ್ವೇಷಾಂ೧೧ಸನ್ಯಾಸಿ [ಮಹಾಲಯಃ |
| 21 | ೧೨ | ಬು೭||| | ಆ್ಲ೧೪ | ಸಿ೩೪||| | ತೈ೭||| | ೪೧॥ | ೧೦| | ಪ್ರದೋಷಃಕಲಿಯುಗಾದಿಃ |
| 22 | ೧೩ | ಗು೧ ಉ್ಪ೫೩||| | ಮ| | ಸಾ೨೬.||| | ವ೧ | ೨೭||| | ||೩ಅ೫೦ | ಸಿಂಹೇಚ೧೪ಪೂ೩ಬು೩೧ |
| 23 | ೩೦ | ಶು೪೯। | ಪೂ೫ ಉ್ತ೧॥ | ಶು೧೯ | ಚ೨೨ | ೨೧||| | ೪೪ | ಕುಜೋದಯಃ ● ಅಮಾವಾಸ್ಯಾ |
| 24 | ೧ | ಶ೪೫ | ಉ್ಪ೫೭||| | ಶು್ಲ೧೨| | ಕಿಂ೧೭। | ೨೧||| | ೪೪||| | ವಿ೨ಶು೩೬ನವರಾತ್ರಾರಂಭಃ |

# ಈ ವಾರದಲ್ಲಿ ನಿಮ್ಮ ಭವಿಷ್ಯ ಹೇಗಿದೆ?



**ತಾರೀಕು ೧೮-೯-೧೯೩೮ರಿಂದ ತಾರೀಕು ೨೪-೯-೧೯೩೮ರ ವರೆಗೆ.**



**ಮೇಷ:** –

ಆರೋಗ್ಯಭಾಗ್ಯದಲ್ಲಿ ಏನೊಂದೂ ಕೊರತೆಯಿಲ್ಲವು. ಆದರೆ ನಿಮಗೆ ನಿಮ್ಮ ಸಂಸಾರದಲ್ಲಿ ಬಹಳ ಬೇಸರ ತೋರುವುದು. ಕಾರಣ. ಪತ್ನೀ ಪುತ್ರರಿಗೂ ನಿಮಗೂ ಸರಿಬಾರದೆ ಕಲಹವಾಗುವುದು. ಸ್ತ್ರೀ ಪೀಡೆಯಿಂದ ಶೋಕಾದ್ಯನರ್ಥ ಪರಂಪರೆಗಳು ಪ್ರಾಪ್ತವಾಗುವುವಲ್ಲದೆ ಸ್ವಲ್ಪ ಮಟ್ಟಿಗೆ ಧನ ವ್ಯಯಕ್ಕೂ ದಾರಿಯಾಗುವುದು. ಆದರೂ ಕೂಡ ಇತರ ವ್ಯವಹಾರಿಕ ವಿಷಯಗಳಲ್ಲಿ ಬಹಳ ಅನುಕೂಲ ಸಂಭವಗಳಿವೆ. ಅಜಾತ ಶತ್ರುಗಳಾಗುವುದರಿಂದಲೂ, ಸರ್ವ ಕಾರ್ಯಗಳಲ್ಲೂ ಸರ್ವತ್ರ ಜಯಶಾಲಿಗಳಾಗುವುದರಿಂದಲೂ, ಸಮಾಜದಲ್ಲಿ ಸ್ಥಾನ ಮಾನಗಳು ದೊರೆಯುವುದರಿಂದಲೂ ನಿಮ್ಮ ಶೋಕಗಳು ಪರಿಹಾರವಾಗುವುದಲ್ಲದೆ, ಕೈಗೊಂಡ ಕಾರ್ಯಭಾಗದಲ್ಲಿ ನಾನಾ ರೀತಿಯಿಂದ ಧನ ಲಾಭವಾಗುವುದು. ತಾ. 18ರಿಂದ 23, 24 ದಿನಗಳು ಉತ್ತಮವಿರುವವು. ವಸ್ತ್ರಾಭರಣಗಳ ಲಾಭ, ಸ್ತ್ರೀಸುಖ, ವಾಹನಾದಿಗಳ ಯೋಗವು ಪ್ರಾಪ್ತವಾಗುವುದು.

**ವೃಷಭ:**—

ನಿಮಗೀವಾರದಲ್ಲಿ ಅನೇಕ ವಿಧದಿಂದ ಧನ ಲಾಭವಾಗುವುದು. ಪರಕೀಯರ ಧನವೂ ಸಿಗುವ ಯೋಗವಿದೆ. ಸ್ವಜನರ ಕುಟುಂಬವೂ ವೃದ್ಧಿಯಾಗುವುದು. ಆದರೆ ಇತರ ವಿಷಯಗಳಲ್ಲಿ ಅಂದರೆ ಪ್ರಕೃತಿಯ ವಿಷಯದಲ್ಲಿ ಬಹಳ ಹಾನಿಯಿದೆ. ತಾಪಜ್ವರವೂ ಉದರ ರೋಗವೂ ಉಂಟಾಗುವುದು. ಶತ್ರುಗಳ ಪೀಡೆಯು ಅಧಿಕವಾಗುವುದು. ಹೊಸತಾಗಿ ಪರಿಚಿತರಾದ ಮಿತ್ರ ಜನರಿಂದ ಅಶುಭಗಳುಂಟಾಗುವವು. ಅನಿವಾರ್ಯವಾದೊಂದು ಭೀತಿಯಿಂದಾಗಿ ಕಾರ್ಯವನ್ನು ಮುಂದರಿಸಧೈರ್ಯವಿಲ್ಲದೆ ಅರ್ಧದಲ್ಲೇ ಕೈಬಿಡುವ ಪ್ರಸಂಗ ಬರುವುದು. ದೀನರಾದ ನಿಮಗೆ ಈ ವಾರವು ಪ್ರವಾಸಕ್ಕೆ ಯೋಗ್ಯವಲ್ಲವು. ತಾ. 19, 20ರ ಮಟ್ಟಿಗೆ ಸ್ತ್ರೀ ಸುಖ ಮತ್ತು ಕಾರ್ಯ ಜಯವು ಆಗುವುದು.

**ಮಿಥುನ:**—

ಸಮಾಜದಲ್ಲಿ ಹೀನ ವಾಕ್ಯವನ್ನು ಕೇಳುವ ಯೋಗವಿದೆ. ಅವನತಿಗೆ ಕಾರಣವಾದ ದುರ್ಬುದ್ಧಿಯು ನಿಮ್ಮಲ್ಲಿ ಹೆಚ್ಚುವುದರಿಂದ ಆ ಕಾರ್ಯದಲ್ಲಿ ಪ್ರವರ್ತಿಸಿ ಸರ್ವರ ಭಯಕ್ಕೂ ಪೀಡೆಗೂ ಒಳಗಾಗುವಿರಿ. ಮಾನಹಾನಿಯಾಗುವುದಲ್ಲದೆ ನಿಮ್ಮ ಸುಖೋಪಭೋಗಗಳಿಗೆ ತುಂಬಾ ತೊಡಕು ತೊಂದರೆಗಳು ಸಂಭವಿಸುವವು. ದೇಹಾರೋಗ್ಯವು ಕೆಡುವುದರಿಂದ ಅತ್ಯಂತ ಶೋಕವೂ ಧನ ವ್ಯಯವೂ ಆಗುವುದು. ಆದರೂ ನಿಮಗೆ ಈ ವಾರದಲ್ಲಿ ಪುತ್ರರಿಂದಲೂ ಕಳ್ಳಕಾಕರಿಂದಲೂ ಧನ ಸಿಗುವ ಯೋಗವಿದೆ. ಮತ್ತು ಕೆಲವೊಂದು ಕಾರ್ಯಗಳಲ್ಲಿ ಧನ ಲಾಭವಾದರೂ ಅದಕ್ಕೆ ಶತ್ರುಗಳ ಪೀಡೆಯು ತಗಲುವದು. ಆದರೂ ನಿಮಗೆ ಬಂಧು ಜನರ ಮತ್ತು ಮಿತ್ರ ಜನರ ಬೆಂಬಲವು ಬಹಳ ಚೆನ್ನಾಗಿರುವುದರಿಂದ ಶತ್ರುಗಳ ಪೀಡೆಯು ನಿಮಗೇನೂ ಬಾಧಕವಾಗಲಾರದು. ತಾ. 19, 20 ಮತ್ತು 23, 24 ಈ ದಿನಗಳಲ್ಲಿ ಕಾರ್ಯ ವಿಘ್ನ, ಅಪನಂಬಿಗೆ ವೈರಿಗಳು ಹೆಚ್ಚಾಗುವುದು.

**ಕರ್ಕಾಟಕ:**—

ಶುಭ ಕಾಲವು ಬಂದಿರುವುದು. ಕಳೆದ ವಾರಕ್ಕಿಂತ ಎಷ್ಟೋ ಭಾಗಗಳಲ್ಲಿ ನಿಮಗೆ ಶುಭದಾಯಕ ಕಾರ್ಯಗಳು ಹೆಚ್ಚಿರುವವು. ಶುಭಾಶುಭ ಗ್ರಹರು ಬಲದಿಂದ ಸಾಮ್ಯವಾಗಿರುವುದರಿಂದ ಇಷ್ಟಾನಿಷ್ಟಗಳು ಸಮಾನವಾಗಿ ಅನುಭವಕ್ಕೆ ಬರುವವು. ಆರೋಗ್ಯವು ಕೆಟ್ಟು ಪಿತ್ಥ ಸಂಬಂಧ ರೋಗವು ವಿಶೇಷವಾಗಿ ಬಹಳ ಪೀಡೆಯನ್ನು ಕೊಡುವುದು. ಶತ್ರುಗಳ ನಾಶದಿಂದಲೂ ಧನ ಲಾಭಕ್ಕೆ ಕಾರಣವಾದ ಸ್ಥಾನ ಪ್ರಾಪ್ತಿಯಾಗುವುದರಿಂದಲೂ ತುಂಬಾ ಸಂತೋಷಪಡುವಿರಿ. ಪ್ರವಾಸಕ್ಕೆ ಇದು ಯೋಗ್ಯ ಕಾಲವಲ್ಲ. ಕಳ್ಳಕಾಕರಿಂದ ಧನ ನಾಶವಾಗುವ ಸಂಭವವಿದೆ. ಪುತ್ರರ ಅನುಕೂಲ್ಯವು ಚೆನ್ನಾಗಿರುವುದು. ಹೆಚ್ಚಾಗಿ ಕಾರ್ಯಗಳಲ್ಲಿ ಅಪಜಯವಾದರೂ ಧನ ಲಾಭಕ್ಕೇನೂ ಹಾನಿಯಿಲ್ಲವು ವಾರದ ಆದ್ಯಂತದಿನಗಳಲ್ಲಿ ಮೃಷ್ಟಾನ್ನ ಭೋಜನ, ಕಾರ್ಯಜಯ.

**ಸಿಂಹ:** –

ಈ ವಾರದಲ್ಲಿ ನಿಮಗೆ ಸಪ್ತಮದ ಗುರುವು ವಿರುದ್ಧನಾಗಿರುವ ಪ್ರಯುಕ್ತ ತೃತೀಯಗತನಾದ ಶುಕ್ರನ ಹೊರತು ಇನ್ನಾವ ಗ್ರಹರೂ ಅನುಕೂಲವಿಲ್ಲವು. ಆದ ಕಾರಣ ಅನೇಕ ಭಾಗಗಳಲ್ಲಿ ಕಷ್ಟ ದುಃಖಗಳನ್ನನುಭವಿಸಲಿದೆ. ಆರೋಗ್ಯವು ಕೆಟ್ಟು ಶರೀರದಲ್ಲಿ ನಾನಾ ತರದ ಪೀಡೆಗಳುಂಟಾಗುವವು. ಎಲ್ಲರಲ್ಲಿಯೂ ಕಲಹ ಮಾಡುವುದರಿಂದಲೂ ಶತ್ರುಗಳ ಪೀಡೆಯು ಅಧಿಕವಾಗುವುದರಿಂದಲೂ ಭಯವು ಹೆಚ್ಚಿ ಕಾರ್ಯವನ್ನು ಅರ್ಧದಲ್ಲೇ ಕೈಬಿಡಬೇಕಾಗುವುದು. ಹೆಚ್ಚಿನ ಜೀನರಾಗುವುದರಿಂದಲೂ ಪರರ ಅಹಿತವನ್ನೇ ಬಯಸಿ ವಂಚನಾ ಕಾರ್ಯಗಳಲ್ಲಿ ಪ್ರವರ್ತಿಸುವುದರಿಂದಲೂ ಎಲ್ಲಾ ಕಡೆಗಳಲ್ಲೂ ತಿರಸ್ಕಾರವೇ ಬಹುಮಾನವಾಗಿ ದೊರೆಯುವದು. ನಾನಾ ರೀತಿಯಲ್ಲಿ ಧನ ವ್ಯಯವಾಗುವ ಪ್ರಸಂಗ ಬರುವುದರಿಂದಲೂ ಪತ್ನೀಪುತ್ರರಿಂದ ವಿಯೋಗ ಬರುವುದರಿಂದಲೂ ಚಿಂತೆಯಿಂದ ಜಡಭರತರಂತಾಗುವರು. ಶುಕ್ರಾಚಾರ್ಯರ ಬಲದಿಂದಾಗಿ ಮೇಲಿನವುಗಳಲ್ಲಿ ಕೆಲವಂಶ ಕ[illegible]

ಮೆಯಾದೀತು. ತಾ. 19, 20 ಮತ್ತು 23, 24 ಈ ದಿನಗಳು ಬಹಳ ಅನಿಷ್ಟಕರ ಗಳಾಗಿವೆ.

**ಕನ್ಯಾ:—**

"ಆರೇನು ಮಾಡುವರು ಆರಿಂದಲೇನ ಹುದು ಪೂರ್ವ ಜನ್ಮದ ವಿಧಿಯು ಬೆನ್ನ ಬಿಡದು" ಎಂದಂತೆ ನಿಮ್ಮ ಅವಸ್ಥೆ ಬಂದಿ ರುವುದು. ಅನುಕೂಲ ಸ್ಥಾನದಲ್ಲಿದ್ದ ಶುಕ್ರನೂ ಕೂಡ ವಿದ್ಧನಾದ ಪ್ರಯುಕ್ತ ಸಕಲ ಗ್ರಹರೂ ನಿಮ್ಮ ಮೇಲೆ ಮುನಿದಿರು ವರು. ಸಂಸಾರದಲ್ಲಿ ಮಾತ್ರವಲ್ಲ ಜೀವ ಮಾನದಲ್ಲೇ ಅನುಭವಿಸಲಿಕ್ಕಿರುವ ಕಷ್ಟ ಗಳೆಲ್ಲವುಗಳ ಅನುಭವವು ಈ ವಾರ ಬರ ಲಿಕ್ಕಿದೆ. ಶರೀರದಲ್ಲಿ ನಾನಾ ರೀತಿಯ ರೋಗಗಳು ತಲೆದೋರುವವು. ಧನ ವ್ಯಯಕ್ಕೆ ಕಾರಣಗಳಾದ ನಾನಾ ವಿಧದ ಅನರ್ಥ ಪರಂಪರೆಗಳು ಮೇಲಿಂದ ಮೇಲೆ ಬರುವವು. ಶತ್ರುಗಳ ಪೀಡೆಯಿಂದಾಗಿ ಅಪಜಯ, ಕಾರ್ಯ ಹಾನಿ, ಮನೋವ್ಯ ಥೆಗಳು ಹೆಚ್ಚಾಗುವವು. ಅಕಸ್ಮಾತ್ ಪ್ರವಾಸವು ಗಂಟು ಬಿದ್ದು ನಾನಾ ರೀತಿ ಯಲ್ಲಿ ಕಷ್ಟವನ್ನು ತಂದೊಡ್ಡುವುದು. ಸ್ತ್ರೀ ಪೀಡೆ ವ ಸ್ತ್ರೀಹೇತುಕವಾದ ಅನಿಷ್ಟ ಗಳುಂಟಾಗುವವು. ಆದ ಕಾರಣ ತಕ್ಕ ಪೂರ್ವ ಸಿದ್ಧತೆಯನ್ನು ಮಾಡಿ ಕೊಂಡಲ್ಲಿ ಎಷ್ಟೋ ಒಳ್ಳಿತು. ತಾ. 21, 22 ಈ ದಿನಗಳಲ್ಲಿ ಬಹಳ ಹಾನಿಯಾಗಲಿದೆ.

**ತುಲಾ:—**

"ಪ್ರಾಯೇಣ ಸಾಮಾಗ್ರ್ಯ ವಿಧೌ ಗುಣಾನಾಂ ಪರಾಙ್ಮುಖೀ ವಿಶ್ವಸೃಜಃ ಪ್ರವೃತ್ತಿಃ" ಸೃಷ್ಟಿಕರ್ತನಾದ ಬ್ರಹ್ಮನು ಇದೊಂದು ಸಂಪ್ರದಾಯವನ್ನು ಹೆಚ್ಚಾಗಿ ಅನುಸರಿಸುವನು. ಏನಂದರೆ, ಬೇಕಾ ದೊಷ್ಟು ಸಂಪತ್ತು, ವಿದ್ಯೆ, ಬುದ್ಧಿ ಇತ್ಯಾದಿ ಗಳಿದ್ದರೂ ಮಕ್ಕಳಿಲ್ಲದಿರುವದು. ಪಾ ಸಂಪತ್ತು ಪುತ್ರರು ಇವೆಲ್ಲ ಇದ್ದರೂ ಬುದ್ಧಿ ಇಲ್ಲದಿರುವುದು. ಹೀಗೆಯೇ ಅಂತೂ ನಿಮ್ಮ ವಿದ್ಯಮಾನವೂ ಕೂಡ ಅಷ್ಟಕ್ಕೆ ಬಂದಿದೆ ಎಂದು ಹೇಳಬಹುದು. ಈ ವಾರ ದಲ್ಲಿ ನಿಮ್ಮ ಶತ್ರುಗಳು ಸತ್ವಹೀನರಾಗು ವರು, ಆರೋಗ್ಯವು ಲಭಿಸುವುದು ಸಮಸ್ತ ಕಾರಣಗಳಿಂದ ಕೂಡಿದ ಶಯನ ಸುಖ ಸ್ತ್ರೀಸುಖವು ನಿಮಗೆ ದತ್ತವಾಗಿರುವುದು. ನಾನಾ ರೀತಿಯಿಂದ ಅಂದರೆ ಸ್ವಕೀಯ ಉದ್ಯೋಗದಲ್ಲಿ, ಮತ್ತು ಇತರ ವಿಧಗಳಿಂ ದಲೂ ಧನಲಾಭವಾಗುವದು. ಮಿತ್ರ ಜನರು ಬಂಧು ಜನರು ಹೆಚ್ಚುವರು. ಇಷ್ಟೆಲ್ಲಾ ಅನುಕೂಲಗಳಿದ್ದರೂ ನಿಮ್ಮ ಮಕ್ಕಳಿಂದಾಗಿ ಶೋಕವು ಉಂಟಾಗು ವದು. ಕಾರಣ ನಿಮ್ಮ ಮಾತನ್ನು ಕೇಳದೆ ದುಷ್ಕಾರ್ಯದಲ್ಲಿ ಪ್ರವರ್ತಿಸಿ ನಿಮ್ಮ ಕಾರಣರಾಗುವರು ಮತ್ತು ಅಕಸ್ಮಾತ್ ಪ್ರವಾಸವು ಸಂಭವಿಸೀತು. ಹೆಚ್ಚಾಗಿ ಈ ದೋಷಗಳು ಸಜ್ಜನರಿಗೆ ಫಲದಾಯಕ ಗಳಾಗುವುದಿಲ್ಲ. ವಾರದ ಆದ್ಯಂತ ದಿನ ಗಳು ಉತ್ತಮಗಳಲ್ಲ.

**ವೃಶ್ಚಿಕ:--**

ಹೆಚ್ಚಿನಂಶ ಈ ವಾರವು ನಿಮಗೆ ಸಕಲ ಭಾಗಗಳಲ್ಲೂ ಅನುಕೂಲವಿರುವದು. "ಆದರೆ ಮಾತು ಬಲ್ಲವನಿಗೆ ಜಗಳವಿಲ್ಲ, ಊಟಬಲ್ಲವನಿಗೆ ರೋಗವಿಲ್ಲ"ವೆಂಬಂತೆ ನೀವು ವ್ಯವಹಾರದಲ್ಲಿ ಬಹಳ ಜಾಣ್ಮೆ ಯಿಂದ ವ್ಯವಹರಿಸಬೇಕು. ಇಲ್ಲವಾದಲ್ಲಿ ಅನೇಕ ಜಗಳಗಳುಗಂಟು ಬೀಳುವವು. ಎಲ್ಲರೂ ನಿಮ್ಮನ್ನು ಗೌರವಿಸುವರು, ಒಳ್ಳೇ ಸ್ಥಾನವನ್ನು ಪಡೆಯುವಿರಿ, ರಾಜ ಕೀಯ ರಂಗದಲ್ಲಿಯೂ ಇತರ ಕಾರ್ಯ ಗಳಲ್ಲೂ ಜಯವು ನಿಮ್ಮ ಕೈವಶವಾಗಿರು ವುದು. ಬಾಹ್ಯ ಸುಖ ಮತ್ತು ಆಂತರಿಕ ಸುಖವೂ ಕೂಡ ಚೆನ್ನಾಗಿರುವುದು. ಕಾರ್ಯಗಳಲ್ಲೆಲ್ಲಾ ತೃಪ್ತಿಕರವಾದ ಲಾಭ ವಾಗುವುದು. ಸಂಸಾರದಲ್ಲಿ ಯಾವ ಭಾಗದಲ್ಲೂ ಕೊರತೆಯಿಲ್ಲವು. ಪರಿ ಜನರು, ಮಿತ್ರರೂ, ಸ್ತ್ರೀ ಇವರಿಂದ ತುಂಬಾ ತೃಪ್ತಿಯಾಗಿರುವಿರಿ. ವಾರಾದಿ ಮೂರು ದಿನಗಳು ಸ್ವಲ್ಪ ಕೆಟ್ಟಿರುವುದರಿಂದ ಆರೋಗ್ಯ ಹಾನಿ, ಅನಿಷ್ಟಗಳು ತಲೆ ದೋರುವವು.

**ಧನು:—**

ಅಂಗಾಂಗಗಳ ನೋವುಗಳೇ ಮುಂತಾದ ರೀತಿಯಲ್ಲಿ ದೇಹ ಪೀಡೆಯು ಹೆಚ್ಚಿ ಧಾತು ಕ್ಷಯವಾಗಿ ದೇಹವು ಕ್ಷೀಣ ತ್ವವನ್ನು ಹೊಂದುವುದು. ನಿಮಗೆ ಕಾರ್ಯಗಳಲ್ಲಿ ಜಯವೂ, ಕೈಗೊಂಡ ಕಾರ್ಯಗಳನ್ನು ಜಯಶೀಲವಾಗಿ ಕೊನೆ ಗೊಳಿಸುವ ಶಕ್ತಿಯೂ ಇದೆ. ಆದರೆ ಶತ್ರುಗಳು ಪ್ರಬಲರಾಗಿದ್ದು ಕಾರ್ಯ ಗಳಿಗೆ ವಿಘ್ನಸಮೂಹವನ್ನು ತಂದೊಡ್ಡಿ ಹೆಚ್ಚಾಗಿ ತಂಟೆ ಮಾಡುವರು. ಮಿತ್ರ ಜನರಿಂದಾಗಿ ಲಾಭವೂ ಅಭಿವೃದ್ಧಿಯೂ ಇದೆ. ನಿಮಗೆ ಶತ್ರುಗಳು ಹೆಚ್ಚಾಗಲು, ಹೆಚ್ಚಾಗಿ ಪೀಡಿಸಲು ನಿಮ್ಮ ಮನಸ್ಸೇ ಕಾರಣವಾಗಿರುವುದು. ಅದು ವ್ಯಕ್ತವಾಗಿ ಯೂ ಚಂಚಲವಾಗಿಯೂ ಇರುವುದರಿಂದ ದುಷ್ಕಾರ್ಯದಲ್ಲಿ ಮುಂದರಿವುದು. ಸಂಸಾರದಲ್ಲಿ ಕಲಹವುಂಟಾಗುವುದರಿಂದ ಮನಸ್ಸಿಗೆ ಸುಖವಿಲ್ಲವು. ವಾರದ ಆದ್ಯಂತ ಭಾಗಗಳು ಚೆನ್ನಾಗಿರುವುದರಿಂದ ಇಷ್ಟ ಕಾರ್ಯ ಸಿದ್ಧಿ. ಸ್ಥಾನ ಪ್ರಾಪ್ತಿ.

**ಮಕರ:—**

ಈ ವಾರದಲ್ಲಿ ನಿಮಗೆ ಹೆಚ್ಚಿನ ಕೆಡು ಕಾಗಲಿ ಒಳ್ಳೆಯದಾಗಲಿ ಸಂಭವಿಸದು. ಶುಭಾಶುಭ ಗ್ರಹರು ಸಮಬಲರಾಗಿರು ವುದೇ ಇದಕ್ಕೆ ಮುಖ್ಯ ಕಾರಣ. ಶತ್ರು ಗಳ ಪೀಡೆಯಿಂದಲೂ ಕೆಲವಂಶಧನವು ಖರ್ಚಾಗುವುದು. ಕೈಗೊಂಡ ಕಾರ್ಯ ಗಳು ಜಯವಾಗುವವು. ಧನವೂ ಸಿಗು ವದು, ವಸ್ತ್ರ ಲಾಭವಾಗುವದು. ಎಷ್ಟೊಂದು ಜಾಗರೂಕರಾಗಿದ್ದರೂ, ಮಿತ್ರ ಭಾರ್ಯೆಯರಾದರೂ ಕಲಹವು ತಪ್ಪದು. ಬಲಿಷ್ಠರಾದ ಶತ್ರುಗಳನ್ನೂ ಕೂಡ ತೃಣೀ ಕರಿಸಿ ಸ್ವೇಚ್ಛೆಯಾಗಿ ಪ್ರವರ್ತಿಸುವ ಶಕ್ತಿಯು ನಿಮಗಿದೆ. ದಾಸ ದಾಸಿಯರು ಇತರ ವಿಭೂತಿಗಳು ಲಭಿಸುವವು. ವಾರದ ಆದ್ಯರ್ಧ ಭಾಗವು ಉತ್ತಮವಿರುವುದು. ಧನಲಾಭ, ಆರೋಗ್ಯ ಲಾಭ, ಸ್ತ್ರೀ ಸಹಿತ ದ್ರವ್ಯ ಲಾಭ ಇವುಗಳ ಯೋಗವಿದೆ.

**ಕುಂಭ:—**

ನಿಮ್ಮ ಮೂರ್ಖತನದಿಂದಾಗಿ ನಿಮಗೆ ಅನೇಕ ವಿಪತ್ತುಗಳು ಸಂಭವಿಸಲಿದೆ ಈ ವಾರದಲ್ಲಿ. ಭಯ ದುಃಖಗಳು ಮೇಲಿಂದ ಮೇಲೆ ಬರುವವು. ಸರ್ವತ್ರ ಜನರಲ್ಲಿ ಅದರಲ್ಲೂ ಹೆಚ್ಚಾಗಿ ವಿಜಾತಿಯರಲ್ಲಿ ಕಲಹವುಂಟಾಗುವದು. ಅಷ್ಟೇಕೆ ನಿಮ್ಮಾ ಕೆಯೇ ನಿಮ್ಮೊಡನೆ ಯಾವಾಗಲೂ ಜಗ ಳಾಡುವಳು. ಹಣದ ಖರ್ಚಿಗೆ ನೂರಾರು ದಾರಿಗಳಾಗುವವು. ಕಣ್ಣುನೋವು ಹೊಟ್ಟೆ ನೋವು ಇತ್ಯಾದಿ ರೋಗಗಳಿಂದ ಶರೀರ

(೩೮ನೇ ಪುಟ ನೋಡಿರಿ.)

# ಕಡೆಯ ಪತ್ರ

ಲೇಖಕಿ:
**ಕರುಣಾ ದೇವಿ, ಧಾರವಾಡ.**

---

ಮೂರೂಸಂಜೆಯಾದದ್ದನ್ನು ಕಂಡು ವೆಂಕಟೇಶ ದೇವರ ಗುಡಿಯ ಹತ್ತಿರದ ಆ ತಾರಣೀ ತೆಗೆದ ಮನೆಯಲ್ಲಿ ನಡು ಹರೆಯದ ಹೆಣ್ಣು ಮಗಳು ದೀಪವನ್ನು ಹಚ್ಚಿ ಬೀದಿಯಲ್ಲಿ ಆಡುತ್ತಿರುವ ಮಕ್ಕಳನ್ನು ಕುರಿತು—

"ಏ ಸರಸಿ, ಏ ರಾಮಾ ಇನ್ನು ಆಟ ಸಾಕು. ಒಳಗೆ ಬರ್‍ರಿ ದೀಪ ಹಚ್ಚಿತು, ಹಸವಿಯಾಗಿಲ್ಲವೇ ನಿಮಗೆ" ಎಂದಳು. ಆಕೆಯ ಮಾತುಗಳನ್ನು ಕೇಳಿ ಒಬ್ಬ ಒಂಭತ್ತು ವರ್ಷದ ಬಾಲಕನೂ ಒಬ್ಬ ಏಳು ವರ್ಷದ ಬಾಲಕಿಯೂ ಆಡುವುದನ್ನು ಬಿಟ್ಟು ಓಡುತ್ತ ಅವಳ ಬಳಿಗೆ ಬಂದರು. ಹುಡುಗನು ಮೈಗೆಲ್ಲ ಧೂಳುಬಡೆದುಕೋಂಡದ್ದನ್ನು ಕಂಡು "ರಾಮಾ ಮುಂಜಾನೆ ಗಂಜೀ ಹಾಕಿಕೊಂಡಿದ್ದೆ–ಎಷ್ಟು ಹೊಲಸು ಮಾಡಿಕೊಂಡಿರುವಿಯಲ್ಲ? ನಿನಗೆ ಹೇಳಿದ್ದಿಲ್ಲವೇ ಹೊಲಸುಮಾಡಿಕೊಳ್ಳಬಾರದೆಂದು" ಎಂದಾಕೆ ಹೇಳಿದಾಗ ಹುಡುಗನು—

"ಇಲ್ಲ ಅವ್ವಾ, ಇನ್ನೊಮ್ಮೆ ಮಾಡಿಕೊಳ್ಳುವುದಿಲ್ಲ, ನಡೆ ಮೊದಲು ನನಗೆ ಊಟಕ್ಕೆ ಹಾಕು ಹಸಿವೆ ಆಗಿದೆ" ಎಂದನು.

ಆಕೆ ಹುಡುಗರನ್ನು ಮುಂದೆ ಕರೆದುಕೊಂಡು ತಲೆಬಾಗಿಲ ವನ ಹಾಕಿ ಅಡುಗೇ ಮನೆಗೆ ನಡೆದಳು.

ಇಬ್ಬರೂ ಮಕ್ಕಳು ಕೈಕಾಲು ತೊಳೆದುಕೊಂಡು ಊಟಕ್ಕೆ ಕುಳಿತರು. ಆಕೆ ಅವರಿಗೆ ಬಡಿಸುವುದಕ್ಕೆ ಒಲೆಯಮೇಲಿನ ತಪ್ಪಲೆಯನ್ನು ಕೆಳಗೆ ಇಳಿಸುತ್ತಿರುವಷ್ಟರಲ್ಲಿ ಹೊರಗೆ ಯಾರೋ "ಸಾವಿತ್ರಿ ಬಾಯಿ, ಸಾವಿತ್ರಿ ಬಾಯಿ" ಎಂದು ಕೂಗುತ್ತಿರುವುದು ಕೇಳಿಸಿತು ಮನೆಯಿಂದಲೇ 'ಓ ಬಂದೆ' ಎಂದಳು. ಮಕ್ಕಳಿಗೆ ಅನ್ನವನ್ನು ಹಾಕಿ ಕೈ ತೊಳೆದುಕೊಂಡು ಹೋಗಿ ಕದವನ್ನು ತೆರೆದಳು. ಹೊರಗೆ ಒಬ್ಬ ಸ್ತ್ರೀಯು ಬಂದಿದ್ದಳು. ಸಾವಿತ್ರಿ ಬಾಯಿಯು ಕದವನ್ನು ತೆರೆಯಲು ಅವಳು ಒಳಗೆ ಬಂದಳು. ಬೆಳಕಿನಲ್ಲಿ ಬಂದ ಆ ಸ್ತ್ರೀಯನ್ನು ಕಂಡು ಮನೆಯ ಹೆಣ್ಣು ಮಗಳು ಕೇಳಿದಳು:— "ಏನು ರಾಧಾ ಬಾಯಿ, ಏಕೆ ಇಂತಹ ವೇಳೆಯಲ್ಲಿ ಬಂದಿರಿ?"

"ಆದ್ರೆ ಸಾವಿತ್ರಿ ಬಾಯಿ, ಅನಸೂಯಾ ಬಂದಿದ್ದಳೇನು ನಿಮ್ಮಲ್ಲಿ? ಮಧ್ಯಾಹ್ನ ಹೊರಗೆ ಹೋದವಳು ಎಂಟುಗಂಟೆ ರಾತ್ರಿಯಾಗುತ್ತ ಬಂದಿದ್ದರೂ ಇನ್ನೂ ಮನೆಗೆ ಬಂದಿಲ್ಲ. ನೋಡ್ರಿ ಎಲ್ಲಿ ಹೋಗಿದ್ದಾಳು?"

"ಏನೋ ನಮ್ಮವ್ವಾ, ಅನಸೂಯನ್ನ ಕಾಣದೆ ಎಂಟು ದಿನವಾಗಿದೆ. ರುಣಾನುಬಂಧಿಕರ ಮನೆಯಿಂದ ಅನಸೂಯಾ ಹಗಲೆಲ್ಲ ಬರುತ್ತಿದ್ದಳು. ಇತ್ತೀಚೆಗೆ ಬರುವುದೇ ಇಲ್ಲ. ಹೋಗಿದ್ದಾಳು ಎಲ್ಲಿಯಾದರೂ ಗೆಳತಿಯರ ಮನೆಗೆ. ಬಂದಾಳು, ಇಷ್ಟೇಕೆ ಗಾಬರಿಯಾಗಿದ್ದೀರಿ"

"ಹಾಗಲ್ಲರಿ ಸಾವಿತ್ರಿ ಬಾಯಿ. ಅನಸೂಯಾ ಗಂಡನನ್ನು ಬಿಟ್ಟು ಬಂದಿದ್ದರಿಂದ ವಿಚಿತ್ರವಾಗಿದ್ದಾಳೆ. ಯಾರ ಕೂಡ ಮಾತಾಡುವುದಿಲ್ಲ. ಎಲ್ಲಿಗೂ ಹೋಗುವುದಿಲ್ಲ. ಅಂತಹಳು ಇಂದು ಒಮ್ಮಿಂದೊಮ್ಮೆ ನನಗೆ ಹೇಳದೆ ಕೇಳದೆ ಹೊರಟು ಹೋದ್ದರಿಂದ ನನಗೆ ಹೆದರಿಕೆಯಾಗಿದೆ. ಹೇಗೆ ಮಾಡಲಿ? ಅವರೂ(ಗಂಡನು) ಊರಲ್ಲಿಲ್ಲ"

"ಗಾಬರಿಯಾಗಬೇಡಿರಿ. ನಮ್ಮವರು ಬಂದ ಕೂಡಲೆ ಕಳಿಸಮಾಡುತ್ತೇನೆ. ಪಾಪ ಅನಸೂಯಾ ಭಂಗಾರದಂತಹ ಹುಡುಗಿ. ಅಂತಹ ಹುಡುಗಿಯನ್ನು ಬಿಡಲಿಕ್ಕೆ ಆತನಿಗೇನು ಆಗಿದ್ದಿತು" ಎಂದು ಸಾವಿತ್ರಿ ಬಾಯಿಯು ಹೇಳುತ್ತಿರುವಲ್ಲಿ ಒಳಗಿನಿಂದ ಮಕ್ಕಳು "ಅವ್ವಾ ಸಾರ ಹಾಕ. ಎಷ್ಟೊತ್ತಾರು ಹಂಗ ಕೂತೇವಲ್ಲ" ಎಂದು ಕೂಗ ಹತ್ತಿದ್ದನ್ನು ಕೇಳಿ ಅವಳು "ಬಂದೆ" ಎಂದು ಒಳಗೆ ಹೋಗಿ ಮಕ್ಕಳಿಗೆ ಬೇಕಾದ್ದನ್ನು ಬಡಿಸಿ ಬಂದಳು.

ಆಗಲಿ ಸಾವಿತ್ರಿ ಬಾಯಿ. ನಿಮ್ಮ ಯಜಮಾನರನ್ನಷ್ಟು ಕಳಿಸಿ ಕೊಡಿರಿ, ಅಲ್ಲಿಯವರೆಗೆ ನಾನೂ ಹಾದಿ ನೋಡುತ್ತೇನೆ ಎಂದು ಹೊರಟಳು. ಆಗ ಸಾವಿತ್ರಿ ಬಾಯಿ ನಿಲ್ರೀ ಕುಂಕುಮ ಹಚ್ಚುತ್ತೇನೆ ಎಂದು ಒಳಗಿನಿಂದ ಕುಂಕುಮ ತಂದು ಹಚ್ಚಿದಳು.

೦O೦

ಸಾವಿತ್ರಿ ಬಾಯಿ ರಾಧಾ ಬಾಯಿಯು ಒಂದೇ ಬೀದಿಯಲ್ಲಿ ಇರುವಂತಹರು. ಹತ್ತರ ಮನೆಯಲ್ಲಿರುವವರು. ರಾಧಾ ಬಾಯಿಯ ಗಂಡನಾದ ರಂಗರಾಯನು ಕಚೇರ

ಆಫೀಸಿನಲ್ಲಿ ಕ್ಲಾರ್ಕನಾಗಿದ್ದನು. ಆತನಿಗೆ ಅನಸೂಯಾ ಎಂಬ ಒಬ್ಬಳೇ ಮಗಳಲ್ಲದೆ ಬೇರೆ ಅಪತ್ಯಗಳು ಇರಲಿಲ್ಲ. ರಂಗರಾಯನು ಮಗಳನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಅವಳಿಗೆ ಶಿಕ್ಷಣ ತಕ್ಕಮಟ್ಟಿಗೆ ಕೊಟ್ಟಿದ್ದನು. ದೊಡ್ಡವಳಾದ ಮೇಲೆ ಅನುರೂಪ ಪತಿಯನ್ನು ಹುಡುಕಿ ಲಗ್ನ ಮಾಡಿಕೊಟ್ಟಿದ್ದನು. ವಾಸುದೇವರಾಯನು ಅನುಸೂಯೆಯ ಗಂಡ. ಶ್ರೀಮಂತನೂ, ತರುಣನೂ, ವಿಲಾಸಿಯೂ ಆಗಿದ್ದನು. ವಾಸುದೇವರಾಯನಿಗೆ ತಂದೆ ತಾಯಿಗಳಿದ್ದರು. ಅವರು ಮಾತ್ರ ಹಳೆಯ ಸಂಪ್ರದಾಯದವರು. ಅವನು ಅನಸೂಯೆಯನ್ನು ಅವಳ ರೂಪ, ಗುಣ, ಲಾವಣ್ಯಗಳನ್ನು ನೋಡಿ ಸಂತೋಷದಿಂದ ಲಗ್ನಮಾಡಿಕೊಂಡನೇನೋ ನಿಜ. ಆದರೆ ಅವಳಿಗೆ ಅಖಂಡ ಸುಖ ಕೊಡಲು ಸಮರ್ಥನಾಗಲಿಲ್ಲ. ಯಾವಾಗಲೂ ಆತನು ಸಂಚಾರಿಯಾಗಿರುವವನು. ಮನೆಗೆ ಬರುವುದೇ ಕಡಿಮೆ. ಈ ಕ್ರಮದಿಂದ ಅತ್ತೆ ಮಾವಂದಿರ ಕಟಕಟೆಗೆ ಅನಸೂಯಾ ಒಳಗಾಗುವ ಹೊತ್ತು ಬಹಳವಾಗಿ ಬರುತ್ತಿತ್ತು. ಇದನ್ನು ಅವಳು ಯಾರ ಮುಂದೆ ಹೇಳುವಳು? ಸಹಿಸಿದಳು ಬಹಳ ದಿನಗಳವರೆಗೆ. ಆದರೆ ಕಾಟವು ಅಸಾಧ್ಯವಾದುದರಿಂದ ಒಮ್ಮೆ ಗಂಡನ ಮುಂದೆ ಸ್ಪಷ್ಟವಾಗಿ ಹೇಳಿಬಿಟ್ಟಳು, “ಇನ್ನು ಮುಂದೆ ಹೀಗೆ ನಡೆದುದಾದರೆ ನನ್ನಿಂದ ಇಲ್ಲಿ ಇರುವದು ಆಗುವುದಿಲ್ಲ”. ಅದಕ್ಕೆ ವಾಸುದೇವರಾಯನು ಅತ್ತೆ ಮಾವಂದಿರು ಅಂದದ್ದನ್ನು ಅನಿಸಿಕೊಂಡು ಅವರ ಸೇವೆಯನ್ನು ಮಾಡುವವಳೇ ನಿಜವಾದ ಆರ್ಯಸ್ತ್ರೀ. ನೀನು ಅವರ ವಿಷಯವಾಗಿ ತಕರಾರು ಮಾಡುತ್ತಿ. ಆದ್ದರಿಂದ ನಿನ್ನ ಸ್ತ್ರೀತ್ವದ ವಿಷಯವಾಗಿ ನನಗೆ ಸಂಶಯ ಬರುತ್ತದೆ.

ಈ ಮಾತನ್ನು ಕೇಳಿ ಅನಸೂಯೆಯ ಕೋಪವು ಅನಿವಾರ್ಯವಾಯಿತು. “ಏನು, ಏನನ್ನುತ್ತೀರಿ, ನನ್ನ ಸ್ತ್ರೀತ್ವದ ವಿಷಯವಾಗಿ ನಿಮಗೆ ಏನು ಸಂಶಯ ಬಂದಿತು. ನಿಮ್ಮ ಮನೆಗೆ ಬಂದು ೬ ತಿಂಗಳಾಯಿತು. ಈ ಅವಧಿಯಲ್ಲಿ ನಾನು ನಿಮ್ಮ ಹೊರತು ಯಾವ ಪರ ಪುರುಷರನ್ನು ನೋಡಿದ್ದೇನೆ. ಯಾರ ಕೂಡೆ ಮಾತನಾಡಿದ್ದೇನೆ ಯಾರಿಗೆ ಪತ್ರ ಬರೆದಿದ್ದೇನೆ” ಎಂದು ಅಂದಳು.

ವಾಸುದೇವರಾಯನಿಗೆ ಸಮರ್ಪಕ ಉತ್ತರ ಹೇಳಲು ಆಗದಿದ್ದರೂ, ವಿಟ್ಟಳಾಗಿ ವರ್ತಿಸುವಳೆಂದೂ ತನ್ನ ಕೂಡೆ ಸಿಕ್ಕ ಸಿಕ್ಕ ಹಾಗೆ ಮಾತಾಡುವಳೆಂದೂ ಮಾವನಿಗೆ ಪತ್ರ ಬರೆದು ಕೂಡಲೆ ಅವಳನ್ನು ತವರುಮನೆಗೆ ಕಳಿಸಿಕೊಟ್ಟಿದ್ದನು.

ಗಂಡನನ್ನು ಬಿಟ್ಟು ಬಂದದ್ದರ ವಿಷಯವಾಗಿ ನಾನಾ ಜನರು ನಾನಾ ತೆರನಾಗಿ ಅನಸೂಯೆಯನ್ನು ಆಡಿಕೊಂಡರು. ಕೆಲವರು ಹೊಗಳಿದರು ಕೆಲವರು ತೆಗಳಿದರು. ರಂಗರಾಯನು ಮಾತ್ರ ಏನೂ ಹೇಳದವನಾಗಿದ್ದನು. ರಾಧಾ ಬಾಯಿಯು ಹಳೆ ಸಂಪ್ರದಾಯದವಳಾಗಿದ್ದಳು. ಮಗಳು ಮನೆಯಲ್ಲಿ ಬಂದು ಕೂತಿದ್ದರಿಂದ ಅವಳಿಗೆ ನಾಲ್ಕು ಜನರಲ್ಲಿ ಮಾತನಾಡಲು ಆಗಿದ್ದಿಲ್ಲ.

ಹೇಗಿದ್ದರೂ ಗಂಡನ ಮನೆಯಲ್ಲಿ ಸಂಸಾರ ಮಾಡಬೇಕು ಎಂದು ಎಲ್ಲರೂ ಹೇಳತೊಡಗಿದ್ದರಿಂದ ಅನುಸೂಯಾ ವಿಷಾದಿತಳಾದಳು. ಸ್ತ್ರೀ ಪತಿಯ ಕೂಡ ಸಂಸಾರ ಮಾಡುವುದು ಅನಸೂಯಳಿಗೆ ಒಪ್ಪಿತವಾದ ಸಂಗತಿಯಾಗಿದ್ದರೂ ನಿಷ್ಕಾರಣವಾಗಿ ತೊಂದರೆ ಕೊಡುವವರ ವಿಷಯವಾಗಿ ಜನರು ಏನೂ ಹೇಳುವುದಿಲ್ಲವೆಂದು ಮರುಗತೊಡಗಿದಳು. ಹೀಗಿರುವಲ್ಲಿ ಅವಳಿಗೆ ತವರುಮನೆಯಲ್ಲಿ ಒಬ್ಬಳು ಗೆಳತಿಯು ಕೂಡಿದಳು ಅವಳ ಹೆಸರು ತ್ರಿವೇಣಿ. ತ್ರಿವೇಣಿಯು ನಿಜವಾಗಿ ಬಲ್ಲವಳು. ಅವಳು ಅನಸೂಯೆಗೆ ನಿಜವಾದ ಜೀವನ ಧರ್ಮದ ಉಪದೇಶ ಮಾಡಿದಳು. ಇದರಿಂದ ಅನಸೂಯಳಿಗೆ ಶಾಂತಿ ಸಿಕ್ಕಂತೆ ಆಯಿತು. ಅವಳು ತನ್ನ ಜೀವನವನ್ನು ಸಮಾಧಾನಿತಳಾಗಿ ಕಳೆಯ ತೊಡಗಿದಳು. ಒಂದು ದಿನ ತ್ರಿವೇಣಿಯ ಉಪದೇಶದಂತೆ ತನ್ನ ಪತಿಗೆ ಒಂದು ಪತ್ರ ಬರೆದಳು. ಅದರಲ್ಲಿ “ಕಡೆಯ ಪತ್ರ” ಎಂದು ಬರೆದಿದ್ದಳು. ತಾನು ತಮ್ಮ ಕೂಡ ಸಂಸಾರಮಾಡಲು ಸಿದ್ಧಳಿರುವಳೆಂದೂ ಆದರೆ ತಾವು ನಿಜವಾದ ಪತಿಧರ್ಮವನ್ನು ಪಾಲಿಸಬೇಕೆಂದು ಬರೆದಿದ್ದಳು. ಅದು ವಾಸುದೇವರಾಯನಿಗೆ ಕೋಪವನ್ನುಂಟುಮಾಡುವಂತಹದಾಯಿತು. ಯಃಕಶ್ಚಿತರಾದ ಸ್ತ್ರೀಯರು ತಮಗೆ ಉಪದೇಶ ಮಾಡಲು ಅರ್ಹರಲ್ಲವೆಂದು ವಾಸುದೇವರಾಯನ ಮತ. ಆ ಪತ್ರವನ್ನು ಓದಿ ಆತನೂ ಒಂದು ಮಾರೋಲೆಯನ್ನು ತನ್ನ ಸತಿಗೆ ಬರೆದನು. ಅದರಲ್ಲಿ ಆತನೂ “ಕಡೆಯ ಪತ್ರ”ವೆಂದೇ ಬರೆದಿದ್ದನು. ತನ್ನ ಜೀವನವನ್ನು ಉದ್ಧಾರಮಾಡಿಕೊಂಡು ಅರ್ಹತೆಯುಳ್ಳವಳಾದರೆ ಮಂದಿಗೆ ಉಪದೇಶ ಮಾಡಬೇಕು ಸಂಸಾರವನ್ನು ಸಾಗಿಸಲಾರದ ಹೇಡಿಯೇ ಇನ್ನೊಮ್ಮೆ ಈ ಪ್ರಕಾರ ಬರೆಯಬೇಡ.

ಗಂಡನ ಪತ್ರದಿಂದ ಅನಸೂಯಾ ಬಹಳ ನೊಂದಿತಳಾದಳು. ಜನರ ಬೀಭತ್ಸತನದ ವರ್ತನವೂ ಪ್ರಾರಂಭ

ವಾಗಿದ್ದಿತು. ಅದರಿಂದಲೂ ಕಂದಿದವಳಾದಳು. ಹೀಗಾಗಿ ಮತ್ತೆ ಅಶಾಂತಿಯ ದಾವಾನಲದಲ್ಲಿ ಅವಳು ಸಿಲುಕಿಕೊಂಡಳು. ಆಗ ಮತ್ತೆ ತ್ರಿವೇಣಿಯ ಬಳಿಗೆ ಹೋಗಲು ತ್ರಿವೇಣಿಯು ಅವಳಿಗೆ ಸತ್ಯಾಗ್ರಹ ಸಮರದಲ್ಲಿ ಭಾಗ ತೆಗೆದುಕೊಳ್ಳಲು ಉಪದೇಶ ಮಾಡಿದ್ದಳು. ಇನ್ನು ನಿನ್ನ ಜೀವನವು ಹೇಯವೆಂದು ಅವನೆಂದರೆ ಸತ್ಯಾಗ್ರಹ ಸಮರದಲ್ಲಿ ಭಾಗ ತೆಗೆದುಕೊಂಡು ಜೀವನವನ್ನು ಪವಿತ್ರಗೊಳಿಸುವದು ಉತ್ತಮವೆಂದು ತ್ರಿವೇಣಿಯು ಉಪದೇಶ ಮಾಡಿದ್ದರಿಂದ ಅಂದೇ ಅವಳು ತ್ರಿವೇಣಿಯ ಸಹಾಯದಿಂದ ಮುಂಬಯಿಗೆ ಪ್ರಯಾಣ ಬೆಳಿಸಿದ್ದಳು. ಒಮ್ಮಿಂದೊಮ್ಮೆ ಅನಸೂಯಾ ಇಲ್ಲದಂತಾದ್ದರಿಂದ ಕ್ರಾಂತಿಯುಂಟಾಯಿತು. ಅನಸೂಯಾನ ತಂದೆಯು ಆಫೀಸಿನ ಕೂಡ 'ಟೂರ' ಮೇಲೆ ಹೋಗಿದ್ದನು. ತಾಯಿಯೊಬ್ಬಳು ಇದ್ದಳು. ತಾಯಿಗೆ ಈ ಸಂಗತಿಯಿಂದ ಪರಮಾವಧಿ ದುಃಖವಾಯಿತು. ಮುಂಜಾನೆ ಹೋದ ಮಗಳು ಸಾಯಂಕಾಲದವರೆಗೆ ತಿರುಗಿ ಬಾರದ್ದನ್ನು ಕಂಡು, ಆವಳು ತನ್ನ ಗುರುತಿನವಳಾದ ಗೆಳೆತಿಯಳಾದ ಸಾವಿತ್ರಿಬಾಯಿಯನ್ನು ಕೇಳಲಿಕ್ಕೆ ಬಂದಿದ್ದಳು. ಸಾವಿತ್ರಿಬಾಯಿ ಆಗ ಮಕ್ಕಳಿಗ ಊಟಕ್ಕೆ ಬಡಿಸುತ್ತಿದ್ದಳು. ಸಾವಿತ್ರಿಬಾಯಿ ಗಂಡನು ಪುರಾಣಿಕನಾಗಿದ್ದನು. ರಂಗರಾಯರ ಆಶ್ರಯವು ಆತನಿಗೆ ಚೆನ್ನಾಗಿದ್ದರಿಂದ ಆತನು ಅವರ ವಿಷಯ ಕೃತಜ್ಞನಾಗಿದ್ದನು.

೦O೦

ರಾಧಾಬಾಯಿಯು ಹೊರಟು ಹೋದ ಮೇಲೆ ತುಸು ವೇಳೆಯಲ್ಲಿ ಸಾವಿತ್ರಿಬಾಯಿಯ ಗಂಡನು ಬಂದನು. ಸಾವಿತ್ರಿಬಾಯಿ ಪತಿಗೆ ರಾಧಾಬಾಯಿಯು ಬಂದ ಉದ್ದೇಶವನ್ನು ಹೇಳಿದಳು ಆ ಸಂಗತಿಯನ್ನು ಕೇಳಿ ಆತನು ಗಾಬರಿಯಾದನು. ರಾತ್ರಿಯಲ್ಲಾ ಆ ಮನೆ ಈ ಮನೆ, ಅಲ್ಲಿ ಇಲ್ಲಿ, ಹೀಗೆ ಇಡೀ ಊರನ್ನೇ ಹುಡುಕಿದರು. ಅನಸೂಯಾನ ಪತ್ತೆ ಹತ್ತಲಿಲ್ಲ. ಆದ್ದರಿಂದ ಕೊನೆಯಲ್ಲಿ ರಾಧಾಬಾಯಿಯು ತನ್ನ ಗಂಡನಿಗೆ ತಾರು ಮಾಡಿಸಿ, ಹೆಚ್ಚಿಗೆ ಹುಡುಕುವದಕ್ಕೆ ಪೋಲಿಸರಿಗೆ ವರ್ದಿ ಕೊಟ್ಟಳು.

೦O೦

ರಂಗರಾಯನಿಗೆ ಈ ಸುದ್ದಿಯು ಮುಟ್ಟಲು ಆತನು ಗಡಬಡಿಯಿಂದ ರಜೆಯನ್ನು ತೆಗೆದುಕೊಂಡು ಊರಿಗೆ ಬಂದನು. ಮಗಳು ಒಮ್ಮಿಂದೊಮ್ಮೆಯೇ ಇಲ್ಲವಾದ್ದರಿಂದ ಆತನು ಗಾಬರಿಯಾದನು. ಎಷ್ಟು ಹುಡುಕಿದರೂ ಅನಸೂಯಾನ ಪತ್ತೆ ಹತ್ತಲಿಲ್ಲ. ಮೂರು ನಾಲ್ಕು ದಿನಗಳಾದ ಮೇಲೆ ಒಂದು ದಿನ 'ಫ್ರೀಪ್ರೆಸ್ಸನ್ನ' ರಂಗರಾಯನು ಓದುತ್ತ ಕುಳಿತಿರಲು ಅದರಲ್ಲಿಯ ಒಂದು ಸಂಗತಿಯನ್ನು ಆ ವಿಷಯಕ್ಕೆ ತಕ್ಕ ಚಿತ್ರವನ್ನು ಕಂಡು ಆಶ್ಚರ್ಯಚಕಿತನಾದನು. ಆ ಪತ್ರದಲ್ಲಿ 'ಅನಸೂಯಾ' ಎಂಬ ದಕ್ಷಿಣದೋರ್ವಳು ನಿನ್ನೆ ಸ್ವಯಂಸ್ಫೂರ್ತಿಯಿಂದ ಆರೂಾದ ಮೈದಾನದಲ್ಲಿ ಝಂಡಾ ವಂದನೆ ಮಾಡುತ್ತಿರುವಾಗ ಹಿಡಿಯಲ್ಪಟ್ಟಳು ಎಂದು ಬರೆದಿತ್ತು. ಅದರ ಕೆಳಗೆ ಅನಸೂಯಾನ ಚಿತ್ರವನ್ನು ಕೊಟ್ಟಿದ್ದರು. ಅದನ್ನು ಓದುತ್ತಲೇ ರಂಗರಾಯನು ರಾಧಾಬಾಯಿಯನ್ನು ಕೂಗಿದನು. ಮತ್ತು ಅವಳಿಗೆ ಆ ಸಂಗತಿಯನ್ನು ತಿಳಿಸಿದನು. ಇಬ್ಬರಿಗೂ ಮಗಳ ಈ ವರ್ತನವು ವಿಚಿತ್ರವೆನಿಸಿತು. ಅನಸೂಯಾ ಮುಂಬಯಿ ವರೆಗೆ ಒಬ್ಬಳೇ ಹೋದಳು ಹೇಗೆ? ಏನಿದು ವಿಚಾರ ಎಂದಳು. ರಂಗರಾಯನು ಮುಂಬಯಿಗೆ ಅನಸೂಯಾಗೆ ಭೆಟ್ಟಿಯಾಗಿ ಬರುತ್ತೇನೆಂದು ಅಂದನು. ರಾಧಾಬಾಯಿಯು ಆಗಲಿ ಅಂದಳು.

೦O೦

ಅನಸೂಯಾಳನ್ನು ಆರ್ಥರ್ ರೋಡಿನಲ್ಲಿಯ ಜೇಲಿನಲ್ಲಿ ರಂಗರಾಯನು ಕಂಡನು. ರಂಗರಾಯನು ಮುಂಬಯಿಯನ್ನು ಮುಟ್ಟುವಷ್ಟರಲ್ಲಿ ಅನಸೂಯಾಳಿಗೆ ಶಿಕ್ಷೆಯಾಗಿತ್ತು. ಆಗಿನ ಕಾಲಕ್ಕೆ ಸತ್ಯಾಗ್ರಹಿಗಳು ಖಟ್ಲೆಯಲ್ಲಿ ಭಾಗತೆಗೆದು ಕೊಳ್ಳುತ್ತಿದ್ದಿಲ್ಲವಾದ್ದರಿಂದ ಸರಕಾರದವರು ಬೇಗ ಬೇಗ ಅವರ ನ್ಯಾಯಗಳನ್ನು ಮುಗಿಸಿ ಬಿಡುತ್ತಿದ್ದರು.

ತಂದೆಗೆ ಅನಸೂಯಾ ಬಹಳ ಹೇಳಲಿಲ್ಲ. 'ಕಡೆಯ ಪತ್ರ' ಎಂದಿಷ್ಟು ಹೇಳಿದಳು.

ಕಡೆಯ ಪತ್ರ ಏನು? ಕಡೆಯ ಪತ್ರ ವಿಚಾರ-

ತನ್ನ ಗಂಡನಿಂದ ಬಂದ ಕಡೆಯ ಪತ್ರದ ಸಂಗತಿಯನ್ನು ನಿವೇದಿಸಿ. ಹೆಂಗಸರೆಂದರೆ ಗಂಡಸರಿಗೆ ಯಃಕಶ್ಚಿತರಾಗಿ ತೋರುತ್ತಾರೆ. ಅದಕ್ಕಾಗಿ ಆ ಭಾವನೆಯನ್ನು ತೆಗೆದು ಹಾಕುವದಕ್ಕೆ ನಾನು ಸತ್ಯಾಗ್ರಹದಲ್ಲಿ ಭಾಗ ತೆಗೆದುಕೊಂಡು ಈ ಜೇಲಿಗೆ ಬಂದಿದ್ದೇನೆ ಎಂದಳು.

೦O೦

ಅನಸೂಯಾನ ಗಂಡನು ಮಾತ್ರ ಈ ವೃತ್ತಾಂತದಿಂದ ಅಪಮಾನಿತನಾದನು. ಆತನ ತಾಯಿತಂದೆಗಳಿಗೆ ಮಾತ್ರ ತಮ್ಮ ಸೊಸೆಯ ಸಂಗತಿಯನ್ನು ಜನರ ಮುಂದೆ ಹೇಳುವದಕ್ಕೆ ಮತ್ತಿಷ್ಟು ವಿಷಯವಾಯಿತು.

ಸತ್ಯಾಗ್ರಹ ಸಮರದಿಂದ ಮರಳಿ ಬಂದ ಮೇಲೆ ಸಂಯುಕ್ತ ಘಟನೆಯ ನಿಯಮಾನುಸಾರವಾಗಿ ಸರಕಾರದವರು ಪ್ರಾಂತಿಕ ಸ್ವಾಯತ್ತೆಯನ್ನು ಕೊಟ್ಟರು. ಅದರಲ್ಲಿ ಕಾಂಗ್ರೇಸ್ ಸಮಕ್ಷವೇ ಪ್ರಬಲವಾಗಿ ಆರಿಸಿ ಬಂದಿತು. ಅನಸೂಯಾನ ವಿದ್ವತ್ತು ತ್ಯಾಗತನವನ್ನು ಕಂಡು A. I. C. C. ಯವರು ಮಂತ್ರಿಮಂಡಲದಲ್ಲಿ ಅವಳೊಬ್ಬಳು ಇರಬೇಕೆಂದರು. ಜನತೆಯ ಪೂರ್ಣ ಬೆಂಬಲ ಸಿಕ್ಕಿತು. ಅನಸೂಯಾ ಮಂತ್ರಿಯಾದಳು.

ಅನಸೂಯಾ ಮಂತ್ರಿಯಾದದ್ದು ಕೇಳಿ ಎಲ್ಲರೂ ರಂಗರಾಯನನ್ನು ರಾಧಾಬಾಯಿಯನ್ನು ಅಭಿವಂದಿಸಲು ಬಂದಿದ್ದರು. ಅನಸೂಯಾನ ಗಂಡನು ಕೂಡ ಈ ಸಂಗತಿಯನ್ನು ಕೇಳಿ ಆನಂದಿತನಾಗಿ ಒಂದು ಹೆಂಡತಿಗೆ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಅನಸೂಯಾ-'ಛೆ ಛೆ ತಮ್ಮ ಕೃಪೆಯಿಂದ ತಮ್ಮ ಆಶೀರ್ವಾದದಿಂದ ನಾನು ಈ ಪದವಿಯನ್ನು ಹೊಂದಿದ್ದೇನೆ ನೀವು ಆ ಪತ್ರವನ್ನು ಬರೆಯದಿದ್ದರೆ ನನಗೆ ಈ ಸಾಹಸವನ್ನು ಮಾಡಲು ಶಕ್ಯವಿರಲಿಲ್ಲ. ಎಂದಳು.

ವಾಸುದೇವರಾಯನು:-ಯಾವ ಪತ್ರ?

'ಅದು ನಿಮ್ಮ ಕಡೆಯ ಪತ್ರ' ಎಂದು ಅನಸೂಯಾ ಅಂದಳು.

ಸುತ್ತಲಿನ ಜನರೆಲ್ಲ ಅನಸೂಯಾನ ಈ ನಮ್ರ ಮಾತುಗಳನ್ನು ಕೇಳಿ ಧನ್ಯ ಧನ್ಯ ಎಂದರು.

ಸಾವಿತ್ರಿಬಾಯಿ-"ನಮ್ಮ ಅನಸೂಯಾನಂತಹ ತಿಳಿದ ಹೆಣ್ಣು ಮಕ್ಕಳು ಇರುವರೆಂದ ನಮ್ಮ ದೇಶದಲ್ಲಿ ಬೇಗ ಬೆಳಗು ಆಗುತ್ತದೆ. ಓರೆಯ ಗಂಡು ರಾಮೆಯಾಗಿ ಡೌಲು ಮಾಡುವ ಹೆಂಗಸರಿಂದ ಆಗುವದಿಲ್ಲ. 'ಇಂತಹ ನಿಮ್ಮ ಅನಸೂಯಾ ಅತ್ತೆ ಮಾವಂದಿರ ಕಾಟಕ್ಕೆ ಏಕೆ ಹೆದರಿದಳು!''

ಋಷಿಗಳ ಪ್ರಭಾವವು ಗೊತ್ತಾಗುವದು ರಾಕ್ಷಸರ ಬಾಧೆಯಾದನಂತರ. ಹಾಗೆ ನಮ್ಮಲ್ಲಿ ನಮ್ಮ ಸ್ತ್ರೀಯರಲ್ಲಿ ಈ ತೆರನಾದ ಬೆಳಕು ತೋರಬೇಕಾದರೆ ಈ ಪ್ರಕಾರದ ಅತ್ತೆ ಮಾವಂದಿರ ಕಾಟವಿರಲೇಬೇಕು' ಎಂದು ಸಾವಿತ್ರಿಬಾಯಿ ಅಂದಳು.

ಓಹೋ ನೀವು ಪುರಾಣಿಕರ ಹೆಂಡರಲ್ಲವೋ? ರಂಗರಾಯನು ಅಂದನು.

ಆ ಮಾತುಗಳನ್ನು ಕೇಳಿ ಎಲ್ಲರೂ ನಕ್ಕರು.

---

Printed and published by P Venkataramanacharya for and on behalf of SUPPLY AGENCY LTD., at Manipal Power Press, Udipi.

# The Canara Industrial & Banking Syndicate, Ltd.

ESTD: (INCORPORATED IN BRITISH INDIA). 1925

HEAD OFFICE:

"MUKUND NIVAS"

UDIPI, (S. INDIA).

MEMBER:

RESERVE BANK OF INDIA

BANKERS' CLEARING HOUSE, BOMBAY.

*AN ADDITIONAL BRANCH OF THE SYNDICATE HAS BEEN OPENED IN MANGALORE A FELIX PAI BAZAAR (BLOCK NO. 1) ON THE 31ST OF JULY 1938.*

| | |
|---|---|
| Authorised Capital | Rs. 10,00,000 |
| Issued Capital | ,, 8,00,000 |
| Subscribed Capital | ,, 7,74,500 |
| Paid-up Capital | ,, 3,87,730 |
| Reserves | ,, 2,16,700 |

**Total Resources exceed Rs. 51 Lakhs.**

REGD. NO. M.3935. *Antaranga, 18th Sept. 193*

# ಸಪ್ಲೈ ಏಜನ್ಸಿ ಲಿಮಿಟೆಡ್ ಉಡುಪಿ

●

## ನಿರಖು ಠೇವಣಾತಿಗಳಿಗೆ

### ಬಡ್ಡಿಯ - - - - - ದರಗಳು

| | | | |
|---|---|---|---|
| 3 ರಿಂದ | 6 | ತಿಂಗಳ ವರೆಗೆ | ಸೇ. 4 |
| 7 ರಿಂದ | 11 | ತಿಂಗಳ ವರೆಗೆ | ಸೇ. 5 |
| 12 ರಿಂದ | 18 | ತಿಂಗಳ ವರೆಗೆ | ಸೇ. 6 |

ಎರಡು ವರ್ಷದ ಮೇಲಿನವಕ್ಕೆ ಪ್ರತ್ಯೇಕ ದರಗಳು ಇವೆ.

●

- ದೀನಬಂಧು ನಿಧಿ
- ಇಂಡಸ್ಟ್ರಿಯಲ್ ಕೇಶ್ ಸರ್ಟಿಫಿಕೇಟ್
- ಸೇವ್ ಏಸ್ ಯು ಪ್ಲೀಸ್
- ಇಂಡಸ್ಟ್ರಿಯಲ್ ಡಿಪಾಜಿಟ್

ಈ ಯೋಜನೆಗಳ ಮಾಹಿತಿಗೆ ಬರೆಯಿರಿ.

●

*FINANCE DEPARTMENT*

**SUPPLY AGENCY**

**LIMITED - - - - - - UDIPI**